CPMG / KA / BG-GPO/13/2003-2005 ಸುವರ್ಣ ಕರ್ನಾಟಕ 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಆಗಸ್ಟ್ ೧೮, ೨೦೦೫ (ಶ್ರಾವಣ ೨೭, ಶಕ ವರ್ಷ ೧೯೨೭) | ಸಂಚಿಕೆ ೩೩ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು.

### ಕಾನೂನು ಸಚಿವಾಲಯ

**ವಿಷಯ :** ಶ್ರೀ ಮೊಹ್ಮದ್ ಇಸ್ಮಾಯಿಲ್, ನೋಟರಿ, ಮಂಗಳೂರು ದಕ್ಷಿಣ ಕನ್ನಡ ಜಿಲ್ಲೆ, ಇವರ ರಾಜೀನಾಮೆ ಬಗ್ಗೆ.

**ಓದಲಾಗಿದೆ :** 1. ದಿನಾಂಕ: 21.07.1981ರ ಸರ್ಕಾರಿ ಆದೇಶ ಸಂಖ್ಯೆ: ಲಾ 71 ಎಲ್‌ಸಿಎಲ್ 1981.

2. ಶ್ರೀ ಮೊಹಮದ್ ಇಸ್ಮಾಯಿಲ್, ನೋಟರಿ, ಮಂಗಳೂರು ಇವರ ದಿನಾಂಕ: 27.04.2005ರ ಪತ್ರ.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಶ್ರೀ ಮೊಹಮ್ಮದ್ ಇಸ್ಮಾಯಿಲ್, ನೋಟರಿ, ಮಂಗಳೂರು, ಇವರನ್ನು ಮಂಗಳೂರು ಕಂದಾಯ ತಾಲ್ಲೂಕಿಗೆ ನೋಟರಿಯಾಗಿ ನೇಮಿಸಲಾಗಿತ್ತು.

ಶ್ರೀ ಮೊಹಮ್ಮದ್ ಇಸ್ಮಾಯಿಲ್, ಇವರು ದಿನಾಂಕ: 27.04.2005 ರಂದು ಪತ್ರ ಬರೆಯುತ್ತಾ, ಅನಾರೋಗ್ಯದ ಕಾರಣ ತಾವು ನೋಟರಿ ಹುದ್ದೆಗೆ ರಾಜೀನಾಮೆ ನೀಡುತ್ತಿರುವುದಾಗಿ ತಿಳಿಸಿರುತ್ತಾರೆ. ಅದನ್ನು ಜಿಲ್ಲಾ ನ್ಯಾಯಾಧೀಶರು, ದಕ್ಷಿಣ ಕನ್ನಡ ಇವರು ದಿನಾಂಕ: 2.05.2005ರ ಪತ್ರದೊಂದಿಗೆ ಸರ್ಕಾರಕ್ಕೆ ಕಳುಹಿಸಿಕೊಟ್ಟಿರುತ್ತಾರೆ.

ಆ ಕೋರಿಕೆ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ: 105: ಎಲ್‌ಸಿಎಲ್: 2004 ಬೆಂಗಳೂರು ದಿನಾಂಕ: 18ನೇ ಜುಲೈ 2005**

ಶ್ರೀ ಮೊಹ್ಮದ್ ಇಸ್ಮಾಯಿಲ್, ನೋಟರಿ, ಮಂಗಳೂರು ಇವರು ನೋಟರಿ ಹುದ್ದೆಗೆ ಸಲ್ಲಿಸಿರುವ ರಾಜೀನಾಮೆಯನ್ನು ದಿನಾಂಕ: 2.08.2005 ರಿಂದ ಜಾರಿಗೆ ಬರುವಂತೆ ಸರ್ಕಾರ ಅಂಗೀಕರಿಸಿದ್ದು ಅವರ ಹೆಸರನ್ನು ನೋಟರಿ ರಿಜಿಸ್ಟ್ರರ್‌ನಿಂದ ತೆಗೆದು ಹಾಕಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ಎ. ಬಾಬು ರವೀಂದ್ರನಾಥ್ ಪಟೇಲ್**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),

ಕಾನೂನು ಇಲಾಖೆ (ಆಡಳಿತ-2).

ಪಿ.ಆರ್.1042

### EDUCATION SECRETARIAT
### CORRIGENDUM
**No. ED 112 TPE 2005 Bangalore, dated: 15th June 2005**

In the order portion of Government Order No. ED 381 TPE 2004 dated: 28.02.2005 for the name and address appeared at Sl. No.3 "Prof. Y.D. Mythri, Principal. P.D.A. Engineering College Gulbarga".

Shall be read as "Dr. V. D. Mythri, Principal, P.D.A. Engineering College, Gulbarga."

By Order and in the name of the Governor of Karnataka,

**K. S. VENUGOPAL**

Under Secretary to Government,

Education Department.

PR-1043

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ: ಎನ್. ಆರ್. ಮಾನನಿ, ಕಣ್ಣಿನ ತಜ್ಞರು, ಸಮುದಾಯ ಆರೋಗ್ಯ ಕೇಂದ್ರ, ಮುಳಬಾಗಿಲು, ಕೋಲಾರ ಜಿಲ್ಲೆ ಇವರನ್ನು ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ.

**ಓದಲಾಗಿದೆ :** 1. ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪತ್ರ ಸಂ: ಡಿಪಿಜಿ (ಬೆಂವಿ)1:18 2004-05 ದಿನಾಂಕ: 22.3.2005.

**ಪ್ರಸ್ತಾವನೆ:**

ಮೇಲೆ ಓದಲಾದ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪತ್ರದಲ್ಲಿ ಡಾ:ಎನ್.ಆರ್. ಮಾನನಿ, ಕಣ್ಣಿನ ತಜ್ಞರು, ಸಮುದಾಯ ಆರೋಗ್ಯ ಕೇಂದ್ರ, ಮುಳಬಾಗಿಲು, ಕೋಲಾರ ಜಿಲ್ಲೆ ಇವರು ದಿನಾಂಕ: 1.8.2004 ರಿಂದ 29.9.2004ರ ವರೆಗೆ 60 ದಿನಗಳು ಸಂಯುಕ್ತ ರಜೆಯನ್ನು ವೈದ್ಯಕೀಯ ಆಧಾರದ ಮೇಲೆ ವೈದ್ಯಕೀಯ ಪ್ರಮಾಣ ಪತ್ರ ಇಲ್ಲದೆಯೇ ಮಂಜೂರಾತಿಗಾಗಿ ಕೋರಿಕೆ ಸಲ್ಲಿಸಿ ಕರ್ತವ್ಯಕ್ಕೆ ಗೈರುಹಾಜರಾದ ಪ್ರಯುಕ್ತ ಸದರಿಯವರಿಗೆ ಕರ್ತವ್ಯಕ್ಕೆ ಹಾಜರಾಗುವಂತೆ ಕರೆಪತ್ರ ಕಳುಹಿಸಲಾಗಿದ್ದರೂ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲವೆಂದು ತಿಳಿಸಿರುತ್ತಾರೆ. ಇದರಿಂದಾಗಿ ಸದರಿ ವೈದ್ಯರು ಖಾಯಂಪೂರ್ವ ಸೇವಾವಧಿಯಲ್ಲಿ ಇರುವಾಗಲೇ ಸರ್ಕಾರಿ ಸೇವೆಗೆ 7 ತಿಂಗಳಿಗೂ ಮಿಗಿಲಾಗಿ ಅನಧಿಕೃತ ಗೈರುಹಾಜರಾಗಿರುವುದರಿಂದ ಖಾಯಂಪೂರ್ವ ಸೇವಾ ನಿಯಮಗಳಡಿಯಲ್ಲಿ ಸೇವೆಯಿಂದ ವಿಮೋಚನೆಗೊಳಿಸುವಂತೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸರ್ಕಾರವು ಆಯುಕ್ತರು, ಆಕುಕ ಸೇವೆಗಳು ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 409 ಹೆಚ್‌ಎಸ್‌ಹೆಚ್ 2005 ಬೆಂಗಳೂರು, ದಿನಾಂಕ: 2ನೇ ಜುಲೈ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಡಾ: ಎನ್. ಆರ್. ಮಾನನಿ, ಕಣ್ಣಿನ ತಜ್ಞರು, ಸಮುದಾಯ ಆರೋಗ್ಯ ಕೇಂದ್ರ, ಮುಳಬಾಗಿಲು, ಕೋಲಾರ ಜಿಲ್ಲೆ ಇವರು ದಿನಾಂಕ: 1.08.2004 ರಿಂದ ಖಾಯಂ ಪೂರ್ವ ಸೇವಾವಧಿಯಲ್ಲಿ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿ ಕರ್ತವ್ಯಚ್ಯುತಿ ಎಸಗಿರುವುದರಿಂದ ಸದರಿಯವರನ್ನು ದಿನಾಂಕ: 1.08.2004 ರಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ಖಾಯಂಪೂರ್ವ) ನಿಯಮಾವಳಿ 1977ರ ನಿಯಮ 6ರ ಅಡಿಯಲ್ಲಿ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜೆ. ವಿ. ಚಂದ್ರಶೇಖರ್**

ಪಿ.ಆರ್.1044

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ಕೆ. ಭೀಮಪ್ಪ, ಸಹಾಯಕ ನಿರ್ದೇಶಕರು, ಸಣ್ಣ ಉಳಿತಾಯ, ಕೊಪ್ಪಳ, ಇವರಿಗೆ ಪೂರ್ವಾನ್ವಯವಾಗಿ ಬಡ್ತಿ ನೀಡುವ ಬಗ್ಗೆ.

**ಓದಲಾಗಿದೆ :**
1. ನಿರ್ದೇಶಕರು, ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆ, ಇವರಿಂದ ಬಂದ ಪತ್ರ ಸಂಖ್ಯೆ: ಸಉಸಿ (2)58/ 2000-2001, ದಿನಾಂಕ: 05.12.2003.
2. ಸರ್ಕಾರದ ಅಧಿಸೂಚನೆ ಸಂಖ್ಯೆ: ಆಇ 180 ಸಉಲಾ 2001, ದಿನಾಂಕ: 3.09.2004.
3. ಕಾರ್ಯದರ್ಶಿಗಳು, ಕರ್ನಾಟಕ ಲೋಕಸೇವಾ ಆಯೋಗ, ಇವರಿಂದ ಬಂದ ಪತ್ರ ಸಂಖ್ಯೆ: ಪಿಎಸ್‌ಸಿ 154 ಸಿಎಸ್‌ಎಸ್ 2004, ದಿನಾಂಕ: 25.05.2005.

**ಪ್ರಸ್ತಾವನೆ:**

ಮೇಲೆ(1)ರ ಓದಲಾದ ಪತ್ರದಲ್ಲಿ ಶ್ರೀ ಕೆ. ಭೀಮಪ್ಪ ರವರು ಸಚಿವಾಲಯದ ಸೇವೆಯಲ್ಲಿದ್ದಾಗ ಉತ್ತೀರ್ಣರಾಗಿರುವ ಇಲಾಖಾ ಪರೀಕ್ಷೆಗಳನ್ನು ಪರಿಗಣಿಸಲು ಮನವಿ ಸಲ್ಲಿಸಿದ್ದು, ಇವರ ಕೋರಿಕೆಯನ್ನು ಸರ್ಕಾರವು ಪರಿಗಣಿಸಿ ಒಂದೇ ಇಲಾಖಾ ಪರೀಕ್ಷೆಯನ್ನು 2 ಬಾರಿ ತೇರ್ಗಡೆ ಹೊಂದುವ ಅವಶ್ಯಕತೆ ಇಲ್ಲವೆಂದು ಇವರು ಮೊದಲ ಬಾರಿ 1983-84ರಲ್ಲಿ ತೇರ್ಗಡೆಯಾಗಿರುವುದನ್ನು ಗಣನೆಗೆ 10 ತೆಗೆದುಕೊಳ್ಳಬಹುದೆಂದು ಸ್ಪಷ್ಟನೆ ನೀಡಿರುವ ಹಿನ್ನೆಲೆಯಲ್ಲಿ ನಿರ್ದೇಶಕರು, ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆರವರು ಸದರಿಯವರಿಗೆ ಅಭಿವೃದ್ಧಿ ಅಧಿಕಾರಿ ವೃಂದದಲ್ಲಿ ಇವರಿಗಿಂತ ಜೇಷ್ಠತೆಯಲ್ಲಿ ಕಿರಿಯರಾಗಿರುವ ಅಭಿವೃದ್ಧಿ ಅಧಿಕಾರಿಗೆ ಬಡ್ತಿ ನೀಡಿದ ದಿನಾಂಕವನ್ನೇ ಪರಿಗಣಿಸಿ ಶ್ರೀ ಕೆ. ಭೀಮಪ್ಪ ರವರಿಗೆ ಪೂರ್ವಾನ್ವಯವಾಗಿ ಬಡ್ತಿ ನೀಡಲು ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿಯನ್ನು ಪಡೆದು ಸದರಿಯವರಿಗೆ ದಿನಾಂಕ: 4.4.1989 ರಿಂದ ಜಾರಿಗೆ ಬರುವಂತೆ ಪೂರ್ವಾನ್ವಯವಾಗಿ ಬಡ್ತಿ ನೀಡಿ ಇವರ ಜೇಷ್ಠತೆಯನ್ನು ಮೊದಲನೆಯ ಸ್ಥಾನದಲ್ಲಿರಿಸಿ ದಿನಾಂಕ: 1.1.2003ರಲ್ಲಿ ಅಭಿವೃದ್ಧಿ ಅಧಿಕಾರಿಗಳ ಅಂತಿಮ ಜೇಷ್ಠತಾ ಪಟ್ಟಿಯನ್ನು ಪ್ರಚುರಪಡಿಸಲಾಗಿದೆ ಎಂದು ನಿರ್ದೇಶಕರು, ತಿಳಿಸಿದ್ದಾರೆ.

ಶ್ರೀ ಕೆ. ಭೀಮಪ್ಪ ಇವರಿಗೆ ಸಹಾಯಕ ನಿರ್ದೇಶಕರ ಹುದ್ದೆಗೆ ಬಡ್ತಿ ನೀಡುವ ಪ್ರಸ್ತಾವನೆಯನ್ನು ದಿನಾಂಕ: 7.6.2004 ರಂದು ಇಲಾಖಾ ಮುಂಬಡ್ತಿ ಸಮಿತಿಯು ಪರಿಶೀಲಿಸಿ ಶ್ರೀ ಕೆ. ಭೀಮಪ್ಪರವರಿಗಿಂತ ಜೇಷ್ಠತೆಯಲ್ಲಿ ಕಿರಿಯರಾಗಿರುವ ಶ್ರೀ ಚಂದ್ರೇಗೌಡ ರವರು ಸಹಾಯಕ ನಿರ್ದೇಶಕರ ಹುದ್ದೆಗೆ ಬಡ್ತಿ ಪಡೆದ ದಿನಾಂಕದಿಂದ ಜಾರಿಗೆ ಬರುವಂತೆ ಸಹಾಯಕ ನಿರ್ದೇಶಕರ ಹುದ್ದೆಗೆ ಪೂರ್ವಾನ್ವಯವಾಗಿ ಬಡ್ತಿ ನೀಡಲು ಶಿಫಾರಸ್ಸು ಮಾಡಿದ್ದು ಈ ಪೂರ್ವಾನ್ವಯ ಬಡ್ತಿ ನೀಡಲು ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿ ಅಗತ್ಯವಿದ್ದರಿಂದ ಮೇಲೆ ಓದಲಾದ (2)ರಲ್ಲಿನ ಅಧಿಸೂಚನೆಯಲ್ಲಿ ಭವಿಷ್ಯವರ್ತಿಯಾಗಿ ಅವರಿಗೆ ಸಹಾಯಕ ನಿರ್ದೇಶಕರ ಹುದ್ದೆಗೆ ಬಡ್ತಿ ನೀಡಿ ಖಾಲಿ ಇದ್ದ ಸಹಾಯಕ ನಿರ್ದೇಶಕರು, ಕೊಪ್ಪಳ ಹುದ್ದೆಗೆ ನೇಮಿಸಲಾಗಿದೆ.

ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗವು ಶ್ರೀ ಕೆ. ಭೀಮಪ್ಪ ಇವರಿಗೆ ದಿನಾಂಕ: 2.8.2001 ರಿಂದ ಸಹಾಯಕ ನಿರ್ದೇಶಕರ ಹುದ್ದೆಗೆ ಪೂರ್ವಾನ್ವಯವಾಗಿ ಬಡ್ತಿ ನೀಡುವ ಪ್ರಸ್ತಾವನೆಗೆ ಸಹಮತಿ ನೀಡಿದೆ. ಇದನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 180 ಸಉಲಾ 2001 ಬೆಂಗಳೂರು, ದಿನಾಂಕ: 19ನೇ ಜುಲೈ, 2005**

ಮೇಲೆ ತಿಳಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಜೇಷ್ಠತೆಯಲ್ಲಿ ಕಿರಿಯರಾಗಿರುವ ಶ್ರೀ ಚಂದ್ರೇಗೌಡರವರು ಸಹಾಯಕ ನಿರ್ದೇಶಕರ ಹುದ್ದೆಗೆ ಬಡ್ತಿ ಪಡೆದ ದಿನಾಂಕದಿಂದ ಕರ್ನಾಟಕ ರಾಜ್ಯ ಸಿವಿಲ್ ಸೇವಾ (ಮುಂಬಡ್ತಿ, ವೇತನ ಮತ್ತು ಪಿಂಚಣಿ ಕ್ರಮಬದ್ಧತೆ) ನಿಯಮಗಳು, 1978ರ ನಿಯಮ 2(2) ರನ್ವಯ ಶ್ರೀ ಕೆ. ಭೀಮಪ್ಪ, ಸಹಾಯಕ ನಿರ್ದೇಶಕರು, ಸಣ್ಣ ಉಳಿತಾಯ ಇಲಾಖೆ, ಕೊಪ್ಪಳ, ಇವರಿಗೆ ದಿನಾಂಕ: 2.8.2001 ರಿಂದ ಜಾರಿಗೆ ಬರುವಂತೆ ಪೂರ್ವಾನ್ವಯವಾಗಿ ಸಹಾಯಕ ನಿರ್ದೇಶಕರ ಹುದ್ದೆಗೆ ಸ್ಥಾನಪನ್ನ ಮುಂಬಡ್ತಿ ನೀಡಲು ಸರ್ಕಾರ ಆದೇಶಿಸಿದೆ.

ಈ ಬಡ್ತಿಯು ಶ್ರೀ ರಾಜಶೇಖರಯ್ಯ ಮತ್ತು ಇತರರು ಜೇಷ್ಠತೆ ಬಗ್ಗೆ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಸಲ್ಲಿಸಿರುವ ಅರ್ಜಿ ಸಂಖ್ಯೆ: 9349-50:03ಕ್ಕೆ ನೀಡಲಾಗುವ ತೀರ್ಪಿಗೆ ಒಳಪಟ್ಟಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ಪ್ರಭಾಕರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ, (ಆಡಳಿತ ಮತ್ತು ಮುಂಗಡಗಳು).

ಪಿ.ಆರ್.1045

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ರಾಜಾಸಿಂಗ್, ಬಿನ್ ಉಮರಾವ್ ಸಿಂಗ್ ಠಾಕೂರ್, ಎಪಿಸಿ-397, ಡಿ.ಎ.ಆರ್. ಗುಲ್ಬರ್ಗಾ ಇವರ ವಜಾ ಆದೇಶದ ಬಗ್ಗೆ.

**ಓದಲಾಗಿದೆ :**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು ಗುಲ್ಬರ್ಗಾ ಇವರ ಆದೇಶ ಸಂಖ್ಯೆ: ಡಿಇ:14:2001 ಆಪು ಸಂಖ್ಯೆ: 37:2003 ದಿನಾಂಕ: 6.1.2003.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಈಶಾನ್ಯ ವಲಯ, ಗುಲ್ಬರ್ಗಾ ಇವರ ಆದೇಶ ಸಂಖ್ಯೆ: ಅಪೀಲು:18:ಈವ:2003: ಅಪು ಸಂಖ್ಯೆ: 174:ಈವ:2003 ದಿನಾಂಕ: 21.3.2003.
3. ಅರ್ಜಿದಾರರ ಮನವಿ ಅರ್ಜಿ ದಿನಾಂಕ: 25.06.2004.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರದ ಸಂಖ್ಯೆ: ಅಪೀಲು:2:63: 2004: ದಿನಾಂಕ: 31.01.2005.
5. ಕೆಎಟಿ ಅರ್ಜಿ ಸಂಖ್ಯೆ: 4243/2003 ಆದೇಶ ದಿನಾಂಕ: 28.09.2004
6. ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ:11:ಸಿಎನ್‌ಎಸ್:2005 ದಿನಾಂಕ: 4.7.2005.

**ಪ್ರಸ್ತಾವನೆ:**

ಶ್ರೀ ರಾಜಾಸಿಂಗ್ ಮಾಜಿ ಎಪಿಸಿ 397, ಡಿಎಆರ್, ಗುಲ್ಬರ್ಗಾ, ಇವರ ವಿರುದ್ಧ, (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

ದೋಷರೋಪಣೆ:

"ದಿನಾಂಕ: 9.03.2001 ರಂದು ಗುಲ್ಬರ್ಗಾ ನಗರದ ಮರಗಮ್ಮ ಗುಡಿಯ ಹತ್ತಿರ ಬಂದೋಬಸ್ತ್ ಕುರಿತು ನೇಮಕ ಮಾಡಿದ್ದು, ನೀವು ಸದರಿ ದಿವಸ ಕುಡಿದ ಅಮಲಿನಲ್ಲಿ ಕರ್ತವ್ಯ ನಿರ್ವಹಿಸಿ, ಸಾರ್ವಜನಿಕರೊಂದಿಗೆ ಸಾರ್ವಜನಿಕ ಸ್ಥಳದಲ್ಲಿ ಅನುಚಿತವಾಗಿ ನಡೆದುಕೊಂಡು ಕರ್ತವ್ಯದಲ್ಲಿ ಅತೀವ ನಿರ್ಲಕ್ಷತನ, ಬೇಜವಾಬ್ದಾರಿತನದಿಂದ ನಡೆದುಕೊಂಡು, ಸಾರ್ವಜನಿಕರಿಗೆ ಅವಾಚ್ಯ ಶಬ್ದಗಳಿಂದ ಬೈಯ್ದು, ಪೊಲೀಸ್ ಇಲಾಖೆಯ ಘನತೆಗೆ ಕುಂದು ಬರುವಂತೆ ನಡೆದುಕೊಂಡಿರುವಿರಿ".

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆಯೆಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು ಗುಲ್ಬರ್ಗಾ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 6.1.2003ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಈಶಾನ್ಯ ವಲಯ, ಗುಲ್ಬರ್ಗಾ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 21.03.2003ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಕೆಎಟಿಯಲ್ಲಿ ಅರ್ಜಿಸಲ್ಲಿಸಿದ್ದು, (ಸಂಖ್ಯೆ: 4243/2003) ನಂತರ ಆ ಅರ್ಜಿಯನ್ನು ಹಿಂದೆ ಪಡೆದು, ಸರ್ಕಾರಕ್ಕೆ ಮನವಿ ಸಲ್ಲಿಸಿರುತ್ತಾರೆ. ಈ ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರ ಮೇಲಿನ ಆರೋಪವು ಇಲಾಖಾ ವಿಚಾರಣೆಯಲ್ಲಿ ಸಾಕ್ಷ್ಯಾಧಾರಗಳಿಂದ ಸಾಬೀತಾಗಿರುತ್ತದೆ. ಅರ್ಜಿದಾರರು 1982ರಲ್ಲಿ ಕರ್ತವ್ಯಕ್ಕೆ ಸೇರಿದ್ದು, 2003ರಲ್ಲಿ ಸೇವೆಯಿಂದ ವಜಾಗೊಳ್ಳುವವರೆಗೆ ಆರು ಬಾರಿ ಅಮಾನತ್ತಿನಲ್ಲಿರುತ್ತಾರೆ ಮತ್ತು 346 ದಿನ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಿ ಆಗಿರುತ್ತಾರೆ. 21 ಬಾರಿ ಲಘು ದಂಡನೆಗಳನ್ನು ಸಹ ವಿಧಿಸಲಾಗಿರುತ್ತದೆ. ಶಿಸ್ತು ಇಲಾಖೆಯಲ್ಲಿದ್ದು, ಈ ರೀತಿ ಅಶಿಸ್ತು, ದುರ್ನಡತೆ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿದ್ದರೂ, ಇವರು ಸಲ್ಲಿಸಿರುವ ಸೇವೆಯನ್ನು ಪರಿಗಣಿಸಿ, ಶಿಸ್ತು ಪ್ರಾಧಿಕಾರಿಯ ಆದೇಶವನ್ನು ಭಾಗಶಃ ಮಾರ್ಪಡಿಸಿ, ಅರ್ಜಿದಾರರನ್ನು "ಕಡ್ಡಾಯ ನಿವೃತ್ತಿ"ಗೊಳಿಸಲು ಸರ್ಕಾರ ಉದ್ದೇಶಿಸಿ ಕರ್ನಾಟಕ ಲೋಕ ಸೇವಾ ಆಯೋಗದ ಅಭಿಪ್ರಾಯ ಕೋರಲಾಗಿತ್ತು. ಕರ್ನಾಟಕ ಲೋಕ ಸೇವಾ ಆಯೋಗವು ದಿನಾಂಕ: 4.07.2005ರ ತನ್ನ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಗೆ ಸಹಮತಿಸಿದೆಯೆಂದು ತಿಳಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 205 ಪೊಸಿಅ 2004 ಬೆಂಗಳೂರು, ದಿನಾಂಕ: 21ನೇ ಜುಲೈ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ದಿನಾಂಕ: 6.1.2003ರ ಶಿಸ್ತು ಪ್ರಾಧಿಕಾರಿಯ ಆದೇಶವನ್ನು ಭಾಗಶಃ ಮಾರ್ಪಡಿಸಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ, 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ರಾಜಾಸಿಂಗ್, ಮಾಜಿ ಎಪಿಸಿ 397, ಡಿಎಆರ್ ಗುಲ್ಬರ್ಗಾ ಇವರನ್ನು "ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಿದೆ".

1) ಈ ಆದೇಶವು ಶಿಸ್ತು ಪ್ರಾಧಿಕಾರಿಯು ಆದೇಶ ಹೊರಡಿಸಿದ ದಿನಾಂಕದಿಂದಲೇ ಜಾರಿಗೆ ಬರುತ್ತದೆ ಉಳಿದಂತೆ ಎಲ್ಲಾ ಅಂಶಗಳೂ ಶಿಸ್ತು ಪ್ರಾಧಿಕಾರಿಯ ಆದೇಶದಲ್ಲಿರುವಂತೆಯೇ ಇರುತ್ತದೆ. 2) ಈ ಆದೇಶವನ್ನು ಕರ್ನಾಟಕ ಲೋಕಸೇವಾ ಆಯೋಗವು ದಿನಾಂಕ: 4.7.2005ರ ಪತ್ರದಲ್ಲಿ ನೀಡಿದ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ಕೆ. ಗುಂಡೂರಾವ್**

ಪಿ.ಆರ್.1046 ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆಯ ನಿರ್ದೇಶಕರು (ತಾಂತ್ರಿಕ) ಹುದ್ದೆಗೆ ಹೊಂದಿಕೊಂಡಂತೆ ಪೂರಕ ಸಿಬ್ಬಂದಿ ಹುದ್ದೆಗಳನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 58 ಸಸಿವಿ 2002 ದಿನಾಂಕ: 14.7.2004.
2. ಅಧಿಸೂಚನೆ ಸಂಖ್ಯೆ: ಸಿಆಸುಇ 58 ಸಸಿವಿ 2002 ದಿನಾಂಕ: 14.12.2004.
3. ಸರ್ಕಾರದ ಉಪ ಕಾರ್ಯದರ್ಶಿ, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ ಇವರ ಅ.ಟಿ. ಸಂಖ್ಯೆ ವಿಯಇ 55 ವಿತ್ರಮ 2005 ದಿನಾಂಕ: 30.5.2005.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾಗಿರುವ ದಿನಾಂಕ: 14.7.2004ರ ಸರ್ಕಾರಿ ಆದೇಶದಲ್ಲಿ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆಯಲ್ಲಿ ವೇತನ ಶ್ರೇಣಿ ರೂ. 13820-17220 ಅನ್ನು ಹೊಂದಿರುವ ಒಂದು ನಿರ್ದೇಶಕರು (ತಾಂತ್ರಿಕ) ಹುದ್ದೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸೃಜಿಸಲಾಗಿದೆ. ಕ್ರಮ ಸಂಖ್ಯೆ (2)ರಲ್ಲಿ ಓದಲಾಗಿರುವ ದಿನಾಂಕ: 14.12.2004ರ ಅಧಿಸೂಚನೆಯಲ್ಲಿ ಡಾ: ಹೆಚ್. ಹೊನ್ನೇಗೌಡ, ವಿಜ್ಞಾನಿ, ಇಸ್ರೋ (ಕೇಂದ್ರ ಸರ್ಕಾರ) ಇವರನ್ನು ಮೇಲ್ಕಂಡ ಹುದ್ದೆಯಲ್ಲಿ ಸಾರ್ವಜನಿಕ ಹಿತದೃಷ್ಟಿಯಿಂದ ವಿಲೀನಗೊಳಿಸಲಾಗಿರುತ್ತದೆ. ಅದರಂತೆ, ಇವರು ದಿನಾಂಕ: 15.12.2004 ರಂದು ಈ ಹುದ್ದೆಯಲ್ಲಿ ಕಾರ್ಯವರದಿ ಮಾಡಿಕೊಂಡಿರುತ್ತಾರೆ.

ಉಪ ಕಾರ್ಯದರ್ಶಿ, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ ಇವರು ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾಗಿರುವ ದಿನಾಂಕ: 30.5.2005ರ ಅನಧಿಕೃತ ಟಿಪ್ಪಣಿಯಲ್ಲಿ ನಿರ್ದೇಶಕರು (ತಾಂತ್ರಿಕ) ಹುದ್ದೆಗೆ ಹೊಂದಿಕೊಂಡಂತೆ ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳನ್ನು ಸೃಜಿಸುವಂತೆ ಪ್ರಸ್ತಾವನೆ ಕಳುಹಿಸಿರುತ್ತಾರೆ.

1. ಶೀಘ್ರಲಿಪಿಗಾರರು
2. ಬೆರಳಚ್ಚುಗಾರರು
3. ಸಹಾಯಕರು
4. ಕಿರಿಯ ಸಹಾಯಕರು
5. ವಾಹನ ಚಾಲಕ
6. ದಲಾಯತ್

ಈ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 45 ಸಸಿವಿ 2005, ಬೆಂಗಳೂರು, ದಿನಾಂಕ: 21ನೇ ಜುಲೈ 2005**

ಕರ್ನಾಟಕ ಸರ್ಕಾರ ಸಚಿವಾಲಯದ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆಯಲ್ಲಿ ಸೃಜಿಸಲಾಗಿರುವ ನಿರ್ದೇಶಕರು (ತಾಂತ್ರಿಕ) ಹುದ್ದೆಗೆ ಹೊಂದಿಕೊಂಡಂತೆ ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೃಜಿಸಲು ಮಂಜೂರಾತಿ ನೀಡಲಾಗಿದೆ.

| | | |
|---|---|---|
| 1. | ಪತ್ರಾಂಕಿತ ಸಹಾಯಕ: ಹಿರಿಯ ಶೀಘ್ರಲಿಪಿಗಾರ | 1 ಹುದ್ದೆ |
| 2. | ಕಿರಿಯ ಸಹಾಯಕ | 1 ಹುದ್ದೆ |
| 3. | ದಲಾಯತ್ | 1 ಹುದ್ದೆ |

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ 1150 ವೆಚ್ಚ-5/2005, ದಿನಾಂಕ: 12.7.2005 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು. ಪಿ. ಪ್ರಭು**

ಪಿ.ಆರ್.1053 ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ, (ಸೇವೆಗಳು-2).

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ: ಆರ್. ಸುಧೀಂದ್ರ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಕೆ.ಜಿ.ಎಫ್, ಕೋಲಾರ ಜಿಲ್ಲೆ ಇವರನ್ನು ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಅಧಿಸೂಚನೆ ಸಂ: ಆಕುಕ 939 ಹೆಚ್ಎಸ್ಹೆಚ್ 2003 ದಿನಾಂಕ: 5.8.2004.
2. ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪತ್ರ ಸಂ: ಡಿಪಿಜಿ ಬೆಂವಿ: (1):25:2004-05 ದಿನಾಂಕ: 16.4.2005.

**ಪ್ರಸ್ತಾವನೆ:**

ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯನ್ವಯ ಗ್ರಾಮೀಣ ಕೃಪಾಂಕ ರಹಿತ ಪರಿಷ್ಕೃತ ಪಟ್ಟಿಯಲ್ಲಿ ಆಯ್ಕೆಗೊಂಡ ಡಾ: ಆರ್. ಸುಧೀಂದ್ರ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಇವರು ಸಾರ್ವಜನಿಕ ಆಸ್ಪತ್ರೆ, ಕೆ.ಜಿ.ಎಫ್. ಇಲ್ಲಿಗೆ ಸ್ಥಳನಿಯುಕ್ತಿಯೊಂದಿಗೆ ನೇಮಕಾತಿ ಆದೇಶವನ್ನು ಪಡೆದಿರುತ್ತಾರೆ. ಅದರಂತೆ ದಿನಾಂಕ: 21.08.2004 ರಂದು ಕರ್ತವ್ಯಕ್ಕೆ ಹಾಜರಾಗಿ ತದನಂತರ ದಿನಾಂಕ: 22.8.2004 ರಿಂದ ಕರ್ತವ್ಯಕ್ಕೆ

ಅನಧಿಕೃತ ಗೈರುಹಾಜರಾಗಿರುತ್ತಾರೆಂದು ಮೇಲೆ ಕ್ರಮಾಂಕ (2)ರಲ್ಲಿ ಓದಲಾದ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪತ್ರದಲ್ಲಿ ತಿಳಿಸಿರುತ್ತಾರೆ. ಏತನ್ಮಧ್ಯೆ ಸದರಿ ವೈದ್ಯಾಧಿಕಾರಿಗಳಿಗೆ ಕರ್ತವ್ಯಕ್ಕೆ ಹಿಂದಿರುಗಲು ದಿನಾಂಕ:13.9.2004 ರಂದು ನೋಟೀಸ್ ಜಾರಿಗೊಳಿಸಿದ್ದಾಗ್ಯೂ ಇದುವರೆವಿಗೂ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲವೆಂದು ತಿಳಿಸಿ, ಖಾಯಂಪೂರ್ವ ಸೇವಾವಧಿಯಲ್ಲಿಯೇ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುವುದರಿಂದ ಖಾಯಂಪೂರ್ವ ಸೇವಾ ನಿಯಮಗಳಡಿಯಲ್ಲಿ ಸೇವೆಯಿಂದ ವಿಮೋಚನೆಗೊಳಿಸುವಂತೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸರ್ಕಾರವು ಆಯುಕ್ತರು, ಆಕುಕ ಸೇವೆಗಳು ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 487 ಹೆಚ್ಎಸ್ಹೆಚ್ 2005 ಬೆಂಗಳೂರು, ದಿನಾಂಕ: 2ನೇ ಜುಲೈ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಡಾ: ಆರ್. ಸುಧೀಂದ್ರ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಕೆ.ಜಿ.ಎಫ್. ಕೋಲಾರ ಜಿಲ್ಲೆ ಇವರು ದಿನಾಂಕ: 22.08.2004 ರಿಂದ ಖಾಯಂ ಪೂರ್ವ ಸೇವಾವಧಿಯಲ್ಲಿ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿ ಕರ್ತವ್ಯಚ್ಯುತಿ ಎಸಗಿರುವುದರಿಂದ ಸದರಿಯವರನ್ನು ದಿನಾಂಕ: 22.08.2004 ರಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ಖಾಯಂಪೂರ್ವ) ನಿಯಮಾವಳಿ 1977ರ ನಿಯಮ 6ರ ಅಡಿಯಲ್ಲಿ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜೆ. ವಿ. ಚಂದ್ರಶೇಖರ್**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

ಪಿ.ಆರ್.1054

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ಕರ್ನಾಟಕ ರೇಷ್ಮೆ ಉದ್ಯಮಗಳ ನಿಗಮದ ಕೇಂದ್ರ ಕಛೇರಿಯನ್ನು ಚನ್ನಪಟ್ಟಣದಿಂದ ಬೆಂಗಳೂರಿಗೆ ಸ್ಥಳಾಂತರಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ವಾಕೈ 17 ರೇಉನಿ 2000, ದಿನಾಂಕ: 8.11.2001.
2. ಸರ್ಕಾರಿ ಆದೇಶ ಸಂಖ್ಯೆ: ಡಿಪಿಇಆರ್ 61 ಎಆರ್‌ಯು 2003, ದಿನಾಂಕ: 28.02.2003.
3. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರೇಷ್ಮೆ ಉದ್ದಿಮೆಗಳ ನಿಗಮ ನಿಯಮಿತ ಇವರ ಪತ್ರ ಸಂಖ್ಯೆ E3/ KSIC/ HQR/EST/2003-04, ದಿನಾಂಕ: 27.11.2002, 1.9.2003 ಮತ್ತು 11.9.2003.

**ಪ್ರಸ್ತಾವನೆ:**

ಚನ್ನಪಟ್ಟಣದ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಹೆಚ್ಚಿನ ರೇಷ್ಮೆ ವ್ಯವಸಾಯ ಇದ್ದು, ಹೆಚ್ಚಿನ ಸಂಖ್ಯೆಯ ವ್ಯಾಪಾರಸ್ಥರು ಹಾಗೂ ಸಣ್ಣ ರೇಷ್ಮೆ ಉದ್ದಿಮೆಗಳು ಇರುವುದರಿಂದ, ವ್ಯಾಪಾರಿಗಳಿಗೆ ಮತ್ತು ಡೀಲರ್‌ಗಳಿಗೆ ಕರ್ನಾಟಕ ರೇಷ್ಮೆ ಉದ್ದಿಮೆಗಳ ನಿಗಮದೊಂದಿಗೆ ಸುಲಭವಾಗಿ ಸಂಪರ್ಕ ಹೊಂದಲು ಸಾಧ್ಯವಾಗಿ ಒಳ್ಳೆಯ ಸಮನ್ವಯ ಸಾಧಿಸುವುದರೊಂದಿಗೆ ಒಟ್ಟಾರೆ ಉದ್ದಿಮೆಯ ಅಭಿವೃದ್ಧಿಗಾಗಿ ಕರ್ನಾಟಕ ರೇಷ್ಮೆ ಉದ್ದಿಮೆ ನಿಗಮ ನಿಯಮಿತದ ಕೇಂದ್ರ ಕಛೇರಿಯನ್ನು ಬೆಂಗಳೂರಿನಿಂದ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಚನ್ನಪಟ್ಟಣಕ್ಕೆ ಸ್ಥಳಾಂತರಿಸಲು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಆದೇಶ ಹೊರಡಿಸಲಾಗಿದೆ.

ನಿಗಮದ ಕೇಂದ್ರ ಕಚೇರಿಯನ್ನು ಚನ್ನಪಟ್ಟಣದಿಂದ ಬೆಂಗಳೂರಿಗೆ ಸ್ಥಳಾಂತರಿಸಿದ ಕಾರಣದಿಂದ ನಿಗಮದ ಮಾರಾಟ ಚಟುವಟಿಕೆಗಳ ಮೇಲೆ ತೀವ್ರ ಪರಿಣಾಮ ಉಂಟಾಗಿದೆ. ಇದರಿಂದಾಗಿ ನಿಗಮವು ತನ್ನ ನೌಕರರಿಗೆ ಸಕಾಲದಲ್ಲಿ ವೇತನ ಭತ್ಯೆಗಳನ್ನು ನೀಡಲು ಸಾಧ್ಯವಾಗಲಿಲ್ಲ. ನಿಗಮವು ತೀವ್ರ ಆರ್ಥಿಕ ಅಡಚಣೆಗಳನ್ನು ಅನುಭವಿಸುತ್ತಿರುವ ಹಿನ್ನೆಲೆಯಲ್ಲಿ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ನಿಗಮದ ಜೂಟು ರೇಷ್ಮೆ ಗಿರಣಿ, ಚನ್ನಪಟ್ಟಣ ಮತ್ತು ರೇಷ್ಮೆ ನೇಯ್ಗೆ ಕಾರ್ಖಾನೆ, ಕನಕಪುರ ಇವುಗಳನ್ನು ಮುಚ್ಚಲಾಯಿತು. ಕೇಂದ್ರ ಕಚೇರಿಯನ್ನು ಬೆಂಗಳೂರಿನಿಂದ ಚನ್ನಪಟ್ಟಣಕ್ಕೆ ಸ್ಥಳಾಂತರಿಸಿರುವುದರಿಂದ ನಿಗಮದ ದೈನಂದಿನ ಚಟುವಟಿಕೆಗಳಾದ ನ್ಯಾಯಾಂಗ ಪ್ರಕರಣಗಳು, ಮಾರುಕಟ್ಟೆ, ಬ್ಯಾಂಕಿಂಗ್, ಡೀಲರ್ಸ್‌ಗಳು ಇತ್ಯಾದಿಗಳಿಗೆ ಬೆಂಗಳೂರಿಗೆ ದಿನನಿತ್ಯ ಬರಬೇಕಾಗಿ ನಿಗಮದ ಕಾರ್ಯನಿರ್ವಹಣೆಯ ಮೇಲೆ ಗಂಭೀರ ಉಂಟಾಗಿದೆಯೆಂದು ತಿಳಿಸಿ, ಕೇಂದ್ರ ಕಛೇರಿಯನ್ನು ಚನ್ನಪಟ್ಟಣದಿಂದ ಬೆಂಗಳೂರಿಗೆ ಮರು ಸ್ಥಳಾಂತರಗೊಳಿಸುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ 3ರ ಪತ್ರಗಳಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರೇಷ್ಮೆ ಉದ್ದಿಮೆಗಳ ನಿಗಮ ಇವರು ಕೋರಿರುತ್ತಾರೆ. ನಿಗಮದ ಎಲ್ಲಾ ಮಾರುಕಟ್ಟೆ ಕಾರ್ಯಚಟುವಟಿಕೆಗಳನ್ನು ಬೆಂಗಳೂರಿನಿಂದ ಮಾತ್ರವೇ ಮಾಡಬೇಕಾಗಿರುತ್ತದೆ. ನಿಗಮವು ಬೆಂಗಳೂರಿನಲ್ಲಿ ಪ್ರತಿ ದಿನವೂ ಸರ್ಕಾರಿ ಇಲಾಖೆಗಳು, ಬ್ಯಾಂಕುಗಳು ಮತ್ತು ಆರ್ಥಿಕ ಸಂಸ್ಥೆಗಳೊಂದಿಗೆ ಸಮಾಲೋಚಿಸಬೇಕಾಗುತ್ತದೆ. ಕೇಂದ್ರ ಕಚೇರಿಯನ್ನು ಚನ್ನಪಟ್ಟಣಕ್ಕೆ ಸ್ಥಳಾಂತರಿಸಿರುವುದರಿಂದ ಈ ವಿಷಯದ ಬಗ್ಗೆ ಬೆಂಗಳೂರಿನಲ್ಲಿ ಗಮನಹರಿಸುವ ಅವಕಾಶದಿಂದ ವಂಚಿತವಾಗಿದೆ. ಇದರಿಂದಾಗಿ, ನಿಗಮವು ಮುಂದುವರಿದ ನಷ್ಟವನ್ನು ಅನುಭವಿಸುತ್ತಿದೆ. ಎಂಬ ಕಾರಣಗಳ ಹಿನ್ನಲೆಯಲ್ಲಿ ಕರ್ನಾಟಕ ರೇಷ್ಮೆ ಉದ್ದಿಮೆ ನಿಗಮ ನಿಯಮಿತದ ಕೇಂದ್ರ ಕಚೇರಿಯನ್ನು ಚನ್ನಪಟ್ಟಣದಿಂದ ಬೆಂಗಳೂರಿಗೆ ಸ್ಥಳಾಂತರಿಸಲು ಸರ್ಕಾರವು ತೀರ್ಮಾನಿಸಿದೆ.

**ಸರ್ಕಾರ ಆದೇಶ ಸಂಖ್ಯೆ: ವಾಕೈ 32 ರೇಉನಿ 2005, ಬೆಂಗಳೂರು, ದಿನಾಂಕ: 19ನೇ ಜುಲೈ 2005**

ಕರ್ನಾಟಕ ರೇಷ್ಮೆ ಉದ್ದಿಮೆ ನಿಗಮ ನಿಯಮಿತದ ಕೇಂದ್ರ ಕಛೇರಿಯನ್ನು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಚನ್ನಪಟ್ಟಣದಿಂದ ಬೆಂಗಳೂರಿಗೆ ಈ ಕೂಡಲೇ ಜಾರಿಗೆ ಬರುವಂತೆ ಸ್ಥಳಾಂತರಿಸಲು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಭಾರತಿ ಆರ್. ನಾಯಕ್**
ಪೀಠಾಧಿಕಾರಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ(ರೇಷ್ಮೆ).

ಪಿ.ಆರ್.1057

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಶ್ರೀ ಎಂ. ಎ. ಲೋಹಾನಿ, ಸಹಾಯಕ ಇಂಜಿನಿಯರ್, ಪಂಚಾಯತ್ ರಾಜ್ ಯಾಂತ್ರಿಕ ಉಪವಿಭಾಗ, ಗದಗ ಇವರ ಮೇಲೆ ಇಲಾಖಾ ವಿಚಾರಣೆ ನಡೆಸುವ ಬಗ್ಗೆ-ಆದೇಶ.

**ಓದಲಾಗಿದೆ :**
1. ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಪಂಚಾಯತ್ ರಾಜ್ ಯಾಂತ್ರಿಕ ಉಪ ವಿಭಾಗ, ಗದಗ ಇವರ ಪತ್ರದ ಸಂಖ್ಯೆ: ಸಕಾಇಂ:ಯಾಂಉವಿ: ಗದಗ:155:ದಿನಾಂಕ: 14.08.04.

2. ಸರ್ಕಾರದ ಕಾರಣ ಕೇಳುವ ನೋಟೀಸಿನ ಸಂಖ್ಯೆ: ಗ್ರಾಅಪ 174 ಜಿಪಅ 04, ದಿನಾಂಕ: 11.04.05.
3. ಆಪಾದಿತರ ಲಿಖಿತ ಹೇಳಿಕೆ ದಿನಾಂಕ: 8.5.2005.

**ಪ್ರಸ್ತಾವನೆ:**

ಪಂಚಾಯತ್ ರಾಜ್ ಯಾಂತ್ರಿಕ ಉಪ ವಿಭಾಗದ ಎಲ್ ಎಂಪಿ 315 ರಿಗ್ ಯಂತ್ರವನ್ನು ಅಂದಿನ ಸಹಾಯಕ ಇಂಜಿನಿಯರ್ ಆದ ಶ್ರೀ ಎಂ.ಎ. ಲೋಹಾನಿ ಇವರು ರೂ.4,24,467.00 ಗಳಲ್ಲಿ ಬೃಹತ್ ರಿಪೇರಿ ಮಾಡಿಸಿದ್ದರೂ ಸಹ ಅದು ಸರಿಯಾಗಿ ಕೆಲಸ ನಿರ್ವಹಿಸುತ್ತಿರುವುದಿಲ್ಲ. ಇದಕ್ಕೆ ಸರಿಯಾಗಿ ರಿಪೇರಿ ಮಾಡಿಸದೇ ಬೋಗಸ್ ಬಿಲ್ಲನ್ನು ತಯಾರಿಸಿ ಹಣ ಸಂದಾಯ ಮಾಡಿರುವುದೇ ಕಾರಣವಾಗಿರುತ್ತದೆ. ಈ ಸಂಬಂಧ ಸದರಿಯವರಿಗೆ ಸಾಕಷ್ಟು ಸಲ ಎಚ್ಚರಿಕೆ ನೀಡಿದ್ದರೂ ಸಹ ಸರಿಯಾಗಿ ಕೆಲಸ ನಿರ್ವಹಿಸದೇ ಉಗ್ರಾಣ ಲೆಕ್ಕಪತ್ರಗಳ ದಾಖಲಾತಿಗಳನ್ನು ಎಂಎಎಸ್ ಲೆಕ್ಕಾಚಾರ ರಿಗ್ ಯಂತ್ರಗಳ ರಿಪೇರಿ ಸರಿಯಾಗಿ ನಿರ್ವಹಿಸದೇ ಇರುವ ಕಾರಣ ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸುವಂತೆ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಪಂಚಾಯತ್ ರಾಜ್ ಯಾಂತ್ರಿಕ ಉಪ ವಿಭಾಗ, ಗದಗ ಇವರು ಸರ್ಕಾರಕ್ಕೆ ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಪ್ರಕಾರ ವರದಿ ಸಲ್ಲಿಸಿದ್ದರು. ಈ ಸಂಬಂಧ ಸದರಿಯವರಿಗೆ ಅನುಬಂಧ-1 ರಿಂದ 4 ರಲ್ಲಿ ದೋಷಾರೋಪಣಾ ಪಟ್ಟಿಯನ್ನು ಕಾರಣ ಕೇಳುವ ನೋಟಿಸ್‌ನೊಂದಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ: (2)ರ ಪ್ರಕಾರ ಜಾರಿ ಮಾಡಲಾಗಿತ್ತು. ಆರೋಪಿತರು ತಮ್ಮ ಮೇಲಿನ ಆರೋಪಗಳನ್ನು ನಿರಾಕರಿಸಿ ತಮ್ಮನ್ನು ಆರೋಪಗಳಿಂದ ಮುಕ್ತಗೊಳಿಸುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ: (3)ರ ಪ್ರಕಾರ ಲಿಖಿತ ಹೇಳಿಕೆ ಸಲ್ಲಿಸಿರುತ್ತಾರೆ. ಆದ್ದರಿಂದ ಈ ಪ್ರಕರಣದ ಸತ್ಯಾಸತ್ಯತೆಯನ್ನು ಅರಿಯುವ ಸಲುವಾಗಿ ಇಲಾಖಾ ವಿಚಾರಣೆ ನಡೆಸಲು ಸರ್ಕಾರವು ನಿರ್ಧರಿಸಿ, ಪ್ರಕರಣದಲ್ಲಿ ಶ್ರೀ ಟಿ. ಜೆ. ಮರಿಯಪ್ಪ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲು ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಗ್ರಾಅಪ 174 ಜಿಪಅ 2004, ಬೆಂಗಳೂರು ದಿನಾಂಕ: 16ನೇ ಜುಲೈ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಎಂ. ಎ. ಲೋಹಾನಿ, ಅಂದಿನ ಸಹಾಯಕ ಇಂಜಿನಿಯರ್, ಪಂಚಾಯತ್ ರಾಜ್ ಯಾಂತ್ರಿಕ ಉಪ ವಿಭಾಗ, ಗದಗ ಇವರ ಮೇಲೆ ಕರ್ನಾಟಕ ಸರ್ಕಾರಿ ಸೇವೆ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ-1957ರ ನಿಯಮ-11ರ ವಿಧಿವಿಧಾನಗಳನ್ನು ಅನುಸರಿಸಿ ಇಲಾಖಾ ವಿಚಾರಣೆ ನಡೆಸಲು ಶ್ರೀ ಟಿ. ಜೆ. ಮರಿಯಪ್ಪ, ನಿವೃತ್ತ ಜಿಲ್ಲಾ ಮತ್ತು ಸೆಷನ್ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ನಿಯಮ-11 (5)ರ ರೀತ್ಯಾ ಉಪ ಕಾರ್ಯದರ್ಶಿ (ಆಡಳಿತ) ಜಿಪಂ ಗದಗ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿದೆ.

ಈ ವಿಚಾರಣೆಯನ್ನು ಮೂರು ತಿಂಗಳೊಳಗಾಗಿ ನಡೆಸಿ, ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ನಿಯಮಾನುಸಾರ ನಿಗದಿತ ಸಂಭಾವನೆಯನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಸಿ. ಸುಂದರ**

ಪಿ.ಆರ್.1056

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),

ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ.

## ಮಹಿಳಾ ಹಾಗೂ ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ :** ಅಂಗವಿಕಲರ ಅಧಿನಿಯಮ, ಆಯುಕ್ತರ ಕಛೇರಿಯ ಹೆಸರನ್ನು ಬದಲಾಯಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ: ಮಮಅ:296:ಪಿಹೆಚ್‌ಪಿ:97: ದಿನಾಂಕ: 31.3.98

2. ಆಯುಕ್ತರು ಅಂಗವಿಕಲರ ಅಧಿನಿಯಮ ಇವರ ಪತ್ರ ಸಂಖ್ಯೆ: ಅಂಅನಿ:ಹೆಮ:2005-06:62, ದಿನಾಂಕ:18.04.05.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ (1)ರ ಸರ್ಕಾರಿ ಆದೇಶದಲ್ಲಿ ಕೇಂದ್ರ ಕಾಯ್ದೆಯಾದ ಅಂಗವಿಕಲರ ಅಧಿನಿಯಮ 1995ನ್ನು ಅನುಷ್ಠಾನಗೊಳಿಸಲು ಆಯುಕ್ತರು ಅಂಗವಿಕಲರ ಅಧಿನಿಯಮ ಹುದ್ದೆಯನ್ನು ಹೊಸದಾಗಿ ಸೃಜಿಸಿ ಜೊತೆಗೆ ಕೆಲವು ಸಹಾಯಕ ಸಿಬ್ಬಂದಿ ಹುದ್ದೆಗಳನ್ನು ಹೊಸದಾಗಿ ಸೃಜಿಸಿ ಆವರ್ತಕ ಮತ್ತು ಅನಾವರ್ತಕ ವೆಚ್ಚಗಳಿಗೆ ಮಂಜೂರಾತಿ ನೀಡಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ (2)ರ ಪತ್ರದಲ್ಲಿ ಆಯುಕ್ತರು ಅಂಗವಿಕಲರ ಅಧಿನಿಯಮ ಬೆಂಗಳೂರು ಇವರು ಅಂಗವಿಕಲರ ಅಧಿನಿಯಮ ಆಯುಕ್ತರ ಕಛೇರಿಯ ಹೆಸರನ್ನು ಬದಲಾಯಿಸುವ ಬಗ್ಗೆ ದಿನಾಂಕ: 18.04.2005ರಂದು ನಡೆದ ವಿಧಾನ ಮಂಡಲದ ಕಾಗದ ಪತ್ರಗಳ ಸಮಿತಿ ಸಭೆಯಲ್ಲಿ ಚರ್ಚಿಸಲಾಗಿದ್ದು, ಅಂಗವಿಕಲರ ಅಧಿನಿಯಮ ಆಯುಕ್ತರ ಕಛೇರಿಯ ಹೆಸರನ್ನು ಬದಲಾಯಿಸುವುದು ಸೂಕ್ತವೆಂದು ತೀರ್ಮಾನಿಸಲಾಗಿದೆಯೆಂದು, ತಿಳಿಸಿ ಈ ಕೆಳಕಂಡಂತೆ ಕಛೇರಿಯ ಹೆಸರನ್ನು ಬದಲಾಯಿಸಿ ಸೂಕ್ತ ಸರ್ಕಾರಿ ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ.

| ಹಾಲಿ ಇರುವ ಕಛೇರಿಯ ಹೆಸರು | ಮಾರ್ಪಾಡು ಆಗಬೇಕಾಗಿರುವ ಕಛೇರಿಯ ಹೆಸರು |
|---|---|
| ಆಯುಕ್ತರ ಕಛೇರಿ, ಅಂಗವಿಕಲರ ಅಧಿನಿಯಮ (ಕೇಂದ್ರದ ಅಧಿನಿಯಮದಡಿ ಸ್ಥಾಪಿಸಲಾಗಿದೆ) | ರಾಜ್ಯ ಅಂಗವಿಕಲ ವ್ಯಕ್ತಿಗಳ ಆಯುಕ್ತರ ಕಛೇರಿ ಕರ್ನಾಟಕ (ಕೇಂದ್ರದ ಅಧಿನಿಯಮದಡಿ ಸ್ಥಾಪಿಸಲಾಗಿದೆ). |
| Office of Commissioner For Persons with Disabilities. (ESTD under the Central Act) | Office of the State Commissioner For Persons with Disabilities.Karnataka (ESTD under the Central Act) |

**ಸರ್ಕಾರದ ಆದೇಶ ಸಂಖ್ಯೆ: ಮಮಅ:163:ಪಿಹೆಚ್‌ಪಿ:2005 ಬೆಂಗಳೂರು ದಿನಾಂಕ: 15ನೇ ಜುಲೈ 2005**

ಆಯುಕ್ತರು ಅಂಗವಿಕಲರ ಅಧಿನಿಯಮ ಬೆಂಗಳೂರು ಇವರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲನೆ ಮಾಡಿ ಈ ಕೆಳಗಿನಂತೆ ಅಧಿನಿಯಮ ಕಛೇರಿಯ ಹೆಸರನ್ನು ಮಾರ್ಪಡಿಸಿ ಸರ್ಕಾರದ ಆದೇಶ ಹೊರಡಿಸಲಾಗಿದೆ.

| ಹಾಲಿ ಇರುವ ಕಛೇರಿಯ ಹೆಸರು | ಮಾರ್ಪಾಡು ಆಗಿರುವ ಕಛೇರಿಯ ಹೆಸರು |
|---|---|
| ಆಯುಕ್ತರ ಕಛೇರಿ, ಅಂಗವಿಕಲರ ಅಧಿನಿಯಮ (ಕೇಂದ್ರದ ಅಧಿನಿಯಮದಡಿ ಸ್ಥಾಪಿಸಲಾಗಿದೆ) | ರಾಜ್ಯ ಅಂಗವಿಕಲ ವ್ಯಕ್ತಿಗಳ ಆಯುಕ್ತರ ಕಛೇರಿ ಕರ್ನಾಟಕ (ಕೇಂದ್ರದ ಅಧಿನಿಯಮದಡಿ ಸ್ಥಾಪಿಸಲಾಗಿದೆ). |
| Office of Commissioner For Persons with Disabilities. (ESTD under the Central Act) | Office of the State Commissioner For Persons with Disabilities. Karnataka (ESTD under the Central Act) |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಎಂ. ಚಂದ್ರಮ್ಮ**

ಪಿ.ಆರ್.1052

ಸರ್ಕಾರದ ಅಧೀನ ಕಾರ್ಯದರ್ಶಿ,

ಮಹಿಳಾ ಹಾಗೂ ಮಕ್ಕಳ ಅಭಿವೃದ್ಧಿ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯಃ** ಗ್ರಾಮೀಣ ಕೃಪಾಂಕ ರಹಿತ ಪರಿಷ್ಕೃತ ಆಯ್ಕೆಪಟ್ಟಿಯಲ್ಲಿ ಆಯ್ಕೆಯಾಗದೆ ಸೇವೆಯಿಂದ ವಿಮೋಚನೆಗೊಂಡಿದ್ದ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹಾಗೂ ದಂತ ಆರೋಗ್ಯಾಧಿಕಾರಿಗಳನ್ನು ನೇಮಕಾತಿ ಮಾಡಿಕೊಳ್ಳುವ ಬಗ್ಗೆ.

**ಓದಲಾಗಿದೆಃ**

1) ಸರ್ಕಾರಿ ಆದೇಶ ಸಂಖ್ಯೆಃ ಆಕುಕ 716 ಹೆಚ್‌ಎಸ್‌ಹೆಚ್ 1999 ದಿನಾಂಕಃ20-6-2000
2) ಸರ್ಕಾರಿ ಆದೇಶ ಸಂಖ್ಯೆಃ ಆಕುಕ 2 ಹೆಚ್‌ಎಸ್‌ಡಿ 2000 ದಿನಾಂಕಃ26-8-2000
3) ಸರ್ಕಾರಿ ಸುತ್ತೋಲೆ ಸಂಖ್ಯೆಃ ಸಿಆಸುಇ 45 ಸೇನನಿ 2003 ದಿನಾಂಕಃ 2-7-2003
4) ಸರ್ಕಾರಿ ಅಧಿಸೂಚನೆ ಸಂಖ್ಯೆಃ ಸಿಆಸುಇ 58 ಎಸ್‌ಆರ್‌ಆರ್ 2003 ದಿನಾಂಕಃ 12-11-2003
5) ಸರ್ಕಾರದ ಆದೇಶ ಸಂಖ್ಯೆಃ ಆಕುಕ 939 ಹೆಚ್‌ಎಸ್‌ಹೆಚ್ 2003, ದಿನಾಂಕಃ 17-12-2003 ಹಾಗೂ 20.12.2003
6) ಸರ್ಕಾರದ ಆದೇಶ ಸಂಖ್ಯೆಃ ಆಕುಕ 939 ಹೆಚ್‌ಎಸ್‌ಹೆಚ್ 2003, ದಿನಾಂಕಃ 30-12-2003
7) ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಅರ್ಜಿ ಸಂಖ್ಯೆಃ 975- 979/ 2005 ರ ಮೇಲಿನ ದಿನಾಂಕಃ 8-6-2005 ರ ಆದೇಶ.
8) ಸಿಆಸು ಇಲಾಖೆಯ ಸುತ್ತೋಲೆ ಸಂಖ್ಯೆಃ ಸಿಆಸುಇ 171 ಸೇನೆ 2003 ದಿನಾಂಕಃ 27-6-2005
9) ಆಯುಕ್ತರು, ಆಕುಕ ಸೇವೆಗಳು, ಇವರ ಪತ್ರ ಸಂಖ್ಯೆಃ ಡಿಆರ್‌ಸಿ/4/2005-06 ದಿನಾಂಕಃ 01-07-2005
10) ಆಯುಕ್ತರು, ಆಕುಕ ಸೇವೆಗಳು, ಇವರ ಪತ್ರ ಸಂಖ್ಯೆಃ ಡಿಆರ್‌ಸಿ/2/2005-06 ದಿನಾಂಕಃ 01-07-2005

**ಪ್ರಸ್ತಾವನೆಃ**

ರಾಜ್ಯ ಸಿವಿಲ್ ಸೇವೆಗಳಲ್ಲಿನ ಹುದ್ದೆಗಳ ನೇರ ನೇಮಕಾತಿಯಲ್ಲಿ ಗ್ರಾಮೀಣ ಅಭ್ಯರ್ಥಿಗಳಿಗೆ ಶೇಕಡಾ ಹತ್ತರಷ್ಟು ಕೃಪಾಂಕ ನೀಡಲು ಕರ್ನಾಟಕ ಸಿವಿಲ್ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು 1977 ರ ನಿಯಮ 3 (ಬಿ) ರಲ್ಲಿ ಅವಕಾಶ ಕಲ್ಪಿಸಲಾಗಿತ್ತು. ಈ ನಿಯಮದಡಿಯಲ್ಲಿ ಕ್ರಮಾಂಕ (1) ಹಾಗೂ (2) ರಲ್ಲಿ ಓದಲಾದ ಸರ್ಕಾರಿ ಅಧಿಸೂಚನೆಯಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯಲ್ಲಿ ಇತರರೊಂದಿಗೆ 184 ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಃ 39 ದಂತ ಆರೋಗ್ಯಾಧಿಕಾರಿಗಳ ಹುದ್ದೆಯಲ್ಲಿ ನೇಮಕಾತಿ ಮಾಡಲಾಗಿತ್ತು. ಸದರಿ ನಿಯಮ 3 (ಬಿ) ಯನ್ನು ಕರ್ನಾಟಕ ಉಚ್ಛ ನ್ಯಾಯಾಲಯ ಮತ್ತು ಭಾರತದ ಸರ್ವೋಚ್ಛ ನ್ಯಾಯಾಲಯದಲ್ಲಿ ಪ್ರಶ್ನಿಸಿದ್ದು, ಈ ನ್ಯಾಯಾಲಯಗಳು ನೀಡಿರುವ ತೀರ್ಪುಗಳ ಹಿನ್ನೆಲೆಯಲ್ಲಿ ಸರ್ಕಾರವು ಉಲ್ಲೇಖ (3) ರಲ್ಲಿ ಓದಲಾದ ದಿನಾಂಕಃ 2-7-2003 ರಂದು ಹೊರಡಿಸಲಾದ ಸುತ್ತೋಲೆಯಲ್ಲಿ ಗ್ರಾಮೀಣ ಕೃಪಾಂಕ ಸೌಲಭ್ಯದ ನೇಮಕಾತಿಗೆ ಸಂಬಂಧಿಸಿದಂತೆ ಪರಿಷ್ಕೃತ ಆಯ್ಕೆಪಟ್ಟಿಯನ್ನು ತಯಾರಿಸುವಂತೆ ಸೂಚನೆಗಳನ್ನು ನೀಡಲಾಗಿತ್ತು. ಅದರಂತೆ ಗ್ರಾಮೀಣ ಕೃಪಾಂಕ ರಹಿತ ಪರಿಷ್ಕೃತ ಆಯ್ಕೆಪಟ್ಟಿಯನ್ನು ತಯಾರಿಸಲಾಯಿತು. ಈ ಹಿನ್ನೆಲೆಯಲ್ಲಿ ಸದರಿ ಪರಿಷ್ಕೃತ ಆಯ್ಕೆಪಟ್ಟಿಯಲ್ಲಿ ಸ್ಥಾನ ಪಡೆಯಲಾಗದ ಗ್ರಾಮೀಣ ಕೃಪಾಂಕ ಅಭ್ಯರ್ಥಿಗಳನ್ನು ಮೇಲೆ ಕ್ರಮಾಂಕ (4)ರಲ್ಲಿ ಓದಲಾದ ದಿನಾಂಕಃ 12-11-2003 ರ ಅಧಿಸೂಚನೆಯಲ್ಲಿ ಸೇವೆಯಿಂದ ವಿಮೋಚನೆಗೊಳಿಸುವ ಕುರಿತು ಆದೇಶಿಸಲಾಗಿತ್ತು. ಅದರಂತೆ ಮೇಲೆ ಕ್ರಮಾಂಕ (5) ರಲ್ಲಿ ಓದಲಾದ ಸರ್ಕಾರದ ಆದೇಶಗಳು ದಿನಾಂಕಃ 17-12-2003 ಹಾಗೂ 20-12-2003 ರನ್ವಯ 39 ದಂತ ಆರೋಗ್ಯಾಧಿಕಾರಿಗಳನ್ನು ಹಾಗೂ 184 ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳನ್ನು ಕ್ರಮವಾಗಿ ಸರ್ಕಾರದ ಸೇವೆಯಿಂದ ತೆಗೆದುಹಾಕಲಾಗಿರುತ್ತದೆ. ತದನಂತರ ಸಾರ್ವಜನಿಕ ಹಿತದೃಷ್ಟಿಯಿಂದ ಸದರಿ ಗ್ರಾಮೀಣ ಕೃಪಾಂಕ ಅಭ್ಯರ್ಥಿಗಳನ್ನು ಮೇಲೆ ಕ್ರಮಾಂಕ (6) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಿಕೊಳ್ಳಲಾಗಿರುತ್ತದೆ.

ಗ್ರಾಮೀಣ ಕೃಪಾಂಕ ಸೌಲಭ್ಯದ ನೇಮಕಾತಿಗೆ ಸಂಬಂಧಿಸಿದಂತೆ ಭಾರತದ ಘನ ಸರ್ವೋಚ್ಛ ನ್ಯಾಯಾಲಯವು ಪ್ರಕರಣಗಳನ್ನು ಕರ್ನಾಟಕ ಆಡಳಿತ ನ್ಯಾಯ ಮಂಡಳಿಗೆ ವರ್ಗಾಯಿಸಿದ ಮೇರೆಗೆ ಮೇಲೆ ಕ್ರಮಾಂಕ (7) ರಲ್ಲಿ ಓದಲಾದ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ದಿನಾಂಕಃ 08-06-2005 ರ ಆದೇಶದಲ್ಲಿ ಪ್ರಕರಣಗಳನ್ನು ವಿಲೇವಾರಿ ಮಾಡಿ ಘನ ಸರ್ವೋಚ್ಛ ನ್ಯಾಯಾಲಯವು ಕರ್ನಾಟಕ ಸಿವಿಲ್ ಸೇವೆಗಳು (ಗ್ರಾಮೀಣ ಕೃಪಾಂಕದ ಸೌಲಭ್ಯದೊಂದಿಗೆ ನೇಮಕಾತಿ ಹೊಂದಿದ ನೌಕರರ ವಿಲೀನಾತಿ) (ವಿಶೇಷ) ನಿಯಮಗಳು, 2003 ನ್ನು ಜಾರಿಗೊಳಿಸದಂತೆ ದಿನಾಂಕಃ 12-12-2003 ರಂದು ನೀಡಿದ್ದ ತಡೆಯಾಜ್ಞೆಯನ್ನು ತೆರವುಗೊಳಿಸಿದಂತಾಗಿರುತ್ತದೆ. ಮುಂದುವರಿದು, ಮೇಲೆ ಕ್ರಮಾಂಕ (8) ರಲ್ಲಿ ಓದಲಾದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಸುತ್ತೋಲೆ ದಿನಾಂಕಃ 27-06-2005 ರನ್ವಯ ಗ್ರಾಮೀಣ ಕೃಪಾಂಕ ರಹಿತವಾಗಿ ಆಯ್ಕೆಪಟ್ಟಿ ತಯಾರಿಸಿದಾಗ ಅದರಲ್ಲಿ ಸ್ಥಾನ ಪಡೆಯಲಾಗದೆ ಸೇವೆಯಿಂದ ತೆಗೆದುಹಾಕಲ್ಪಟ್ಟ ಗ್ರಾಮೀಣ ಕೃಪಾಂಕದ ಅಭ್ಯರ್ಥಿಗಳನ್ನು ಕರ್ನಾಟಕ ಸಿವಿಲ್ ಸೇವೆಗಳು (ಗ್ರಾಮೀಣ ಕೃಪಾಂಕದ ಸೌಲಭ್ಯದೊಂದಿಗೆ ನೇಮಕಾತಿ ಹೊಂದಿದ ನೌಕರರ ವಿಲೀನಾತಿ)

(ವಿಶೇಷ) ನಿಯಮಗಳು, 2003 ರನ್ವಯ ಮರುನೇಮಕಾತಿ ಪ್ರಕ್ರಿಯೆಯನ್ನು ಮುಂದುವರಿಸಬಹುದೆಂದು ನೇಮಕಾತಿ ಪ್ರಾಧಿಕಾರಗಳಿಗೆ ಸೂಚಿಸಲಾಗಿದೆ.

ಗ್ರಾಮೀಣ ಕೃಪಾಂಕ ರಹಿತ ಪರಿಷ್ಕೃತ ಆಯ್ಕೆ ಪಟ್ಟಿಯಲ್ಲಿ ಅರ್ಹತೆಯ (ಮೆರಿಟ್) ಆಧಾರದ ಮೇಲೆ ಸ್ಥಾನ ಪಡೆದಂತಹ ಕೆಲವು ಗ್ರಾಮೀಣ ಕೃಪಾಂಕ ಸೌಲಭ್ಯದ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶ ನೀಡಲಾಗಿದ್ದು, ಸ್ಥಾನ ಪಡೆಯಲಾಗದೇ ಬಾಕಿ ಉಳಿದಿದ್ದ ಗ್ರಾಮೀಣ ಕೃಪಾಂಕ ಸೌಲಭ್ಯ ಪಡೆದಿದ್ದ ಅಭ್ಯರ್ಥಿಗಳಿಗೆ ಮೇಲೆ (9) ಹಾಗೂ (10) ರಲ್ಲಿ ಓದಲಾದ ಆಯುಕ್ತರು, ಆಕುಕ ಸೇವೆಗಳು, ಇವರ ಪತ್ರದಲ್ಲಿ ಕ್ರಮವಾಗಿ 143 ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು ಹಾಗೂ 39 ದಂತ ಆರೋಗ್ಯಾಧಿಕಾರಿಗಳಿಗೆ ನೇಮಕಾತಿ ನೀಡುವ ಕುರಿತಂತೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಈ ಎಲ್ಲಾ ಹಿನ್ನೆಲೆಯಲ್ಲಿ ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆಃ ಆಕುಕ 939 ಹೆಚ್‌ಎಸ್‌ಹೆಚ್ 2003 ಬೆಂಗಳೂರು ದಿನಾಂಕಃ14-07-2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣದಿಂದ, ಸರ್ಕಾರವು ಆದೇಶ ಸಂಖ್ಯೆಃ ಆಕುಕ 939 ಹೆಚ್‌ಎಸ್‌ಹೆಚ್ 2003, ದಿನಾಂಕಃ 20.12.2003 ರಲ್ಲಿ ಗ್ರಾಮೀಣ ಕೃಪಾಂಕದಡಿಯಲ್ಲಿ ಆಯ್ಕೆಗೊಂಡಿದ್ದ ವೈದ್ಯಾಧಿಕಾರಿಗಳನ್ನು ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಲ್ಪಟ್ಟ 141 ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು ಃ 39 ದಂತ ಆರೋಗ್ಯಾಧಿಕಾರಿಗಳನ್ನು ರೂ. 7400-200-8800-260-10880-320-13120 ಗಳ ವೇತನ ಶ್ರೇಣಿಯಲ್ಲಿ ಅನುಬಂಧ I ಮತ್ತು II ರಲ್ಲಿ ಸೂಚಿಸಿರುವ ಸ್ಥಳಗಳಲ್ಲಿಯೇ ತಕ್ಷಣದಿಂದ ಜಾರಿಗೆ ಬರುವಂತೆ ನೇಮಕಾತಿ ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಎಸ್.ಕೆ.ತೆಗ್ಗಿನಮನಿ
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರಭಾರ),
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ಸರ್ಕಾರಿ ಆದೇಶ ಸಂಖ್ಯೆಃ ಆಕುಕ 939 ಹೆಚ್‌ಎಸ್‌ಹೆಚ್ 2003 ದಿನಾಂಕಃ 14-07-2005 ಕ್ಕೆ ಅನುಬಂಧ-I**

| ಕ್ರಮ ಸಂಖ್ಯೆ | ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಯ ಹೆಸರು | ನೇಮಕಾತಿ ಮಾಡಿರುವ ಸ್ಥಳ |
|---|---|---|
| **1** | ಡಾಃ ಮಂಜುನಾಥ ಸೋಮಯಾಜಿ | ಪ್ರಾಆಕೇಂದ್ರ, ಕೋಡಿಬೆಂಗ್ರೆ, ಉಡುಪಿ ಜಿಲ್ಲೆ |
| **2** | ಡಾಃ ಜಗದೀಶ ಎಸ್.ಜಿ. | ಪ್ರಾಆಕೇಂದ್ರ, ಮುದರಾಣ, ದಕ್ಷಿಣ ಕನ್ನಡ ಜಿಲ್ಲೆ |
| **3** | ಡಾಃ ದಿನೇಶ್ ಕುಮಾರ್ | ಜಿಲ್ಲಾ ಆಸ್ಪತ್ರೆ, ಚಿಕ್ಕಮಗಳೂರು |
| **4** | ಡಾಃ ಯೋಗಾನಂದ ರೆಡ್ಡಿ ಎನ್. | ಸಾರ್ವಜನಿಕ ಆಸ್ಪತ್ರೆ, ಕೂಡ್ಲಗಿ ಬಳ್ಳಾರಿ ಜಿಲ್ಲೆ |
| **5** | ಡಾಃ ಶೆಟ್ಟಿಕೇರಿ ಎನ್.ಬಿ. | ಸ.ಆ.ಕೇಂದ್ರ, ಬ್ಯಾಡಗಿ, ಹಾವೇರಿ ಜಿಲ್ಲೆ |
| **6** | ಡಾಃ ಆಂಜನೇಯ ರೆಡ್ಡಿ ಎಲ್.ಆರ್. | ಪ್ರಾಆಕೇಂದ್ರ, ದಿಬ್ಬೂರು, ಚಿಕ್ಕಬಳ್ಳಾಪುರ ತಾಃ, ಕೋಲಾರ ಜಿಲ್ಲೆ |
| **7** | ಡಾಃ ಹರಿಪ್ರಸಾದ್ ಸಿ. | ಪ್ರಾಆಘಟಕ, ಮಿರ್ಲೆ, ಕೆ.ಆರ್.ನಗರ ತಾಃ, ಮೈಸೂರು ಜಿಲ್ಲೆ |
| **8** | ಡಾಃ ಶ್ರೀಧರ ಎಂ.ಆರ್. | ಪ್ರಾಆಕೇಂದ್ರ, ಶಿರವಾರ, ರಾಯಚೂರು ಜಿಲ್ಲೆ |
| **9** | ಡಾಃ ರಾಮಚಂದ್ರ ಹೆಚ್. | ಸಾರ್ವಜನಿಕ ಆಸ್ಪತ್ರೆ, ಕಡೂರು, ಚಿಕ್ಕಮಗಳೂರು ಜಿಲ್ಲೆ |
| **10** | ಡಾಃ ಬಸವರಾಜ್ ಎಸ್. ಮುಂಬಯಿ | ಪ್ರಾಆಕೇಂದ್ರ, ಚಡಚಣ, ಬಿಜಾಪುರ ಜಿಲ್ಲೆ |
| **11** | ಡಾಃ ಚೇತನ ಎಂ.ಯು. | ಪ್ರಾಆಕೇಂದ್ರ, ಗೌಡಳ್ಳಿ, ಸೋಮವಾರ ಪೇಟೆ ತಾಃ, ಕೊಡಗು ಜಿಲ್ಲೆ |
| **12** | ಡಾಃ ಮುದ್ದೇಗೌಡರ ಲಿಂಗರಾಜ | ಪ್ರಾಆಕೇಂದ್ರ, ಸಿದ್ದಲಿಂಗಮೊಳ, ಬಳ್ಳಾರಿ ಜಿಲ್ಲೆ |
| **13** | ಡಾಃ ಶಿವಕುಮಾರ್ ಡಿ.ಎಲ್. | ಪ್ರಾಆಕೇಂದ್ರ, ಶುಂಠಿಕೊಪ್ಪ ಸೋಮವಾರ ಪೇಟೆ ತಾಃ, ಕೊಡಗು. |
| **14** | ಡಾಃ ವಿಶ್ವೇಶ್ವರ ಯು.ಕೆ. | ಪ್ರಾಆಕೇಂದ್ರ, ಪೆರುವಾಯಿ, ಬಂಟ್ವಾಳ ತಾಃ, ದಕ್ಷಿಣ ಕನ್ನಡ ಜಿಲ್ಲೆ |
| **15** | ಡಾಃ ಅಶೋಕರೆಡ್ಡಿ ಎಂ. | ಪ್ರಾಆಕೇಂದ್ರ, ಲಕ್ಷ್ಮೀಪುರ, ಶ್ರೀನಿವಾಸಪುರ ತಾಃ, ಕೋಲಾರ ಜಿಲ್ಲೆ |
| **16** | ಡಾಃ ಶೈಲಜಾ ಎಂ. | ಪ್ರಾಆಕೇಂದ್ರ, ಶಿರಾಗೇಟ್, ತುಮಕೂರು ಜಿಲ್ಲೆ |
| **17** | ಡಾಃ ಶಶಿಧರ ವಟಗೇರಿ | ಪ್ರಾಆಕೇಂದ್ರ, ವಂದಾಲ್, ಬಸವನ ಬಾಗೇವಾಡಿ ತಾಃ, ಬಿಜಾಪುರ ಜಿಲ್ಲೆ |
| **18** | ಡಾಃ ಲತಾ ಎಂ.ಜಿ. | ಸಾರ್ವಜನಿಕ ಆಸ್ಪತ್ರೆ, ಹಿರಿಯೂರು, ಚಿತ್ರದುರ್ಗ ಜಿಲ್ಲೆ |

| ಕ್ರಮ ಸಂಖ್ಯೆ | ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಯ ಹೆಸರು | ನೇಮಕಾತಿ ಮಾಡಿರುವ ಸ್ಥಳ |
|---|---|---|
| 19 | ಡಾಃ ರಮೇಶ್ ಎನ್.ಟಿ. | ಸಾರ್ವಜನಿಕ ಆಸ್ಪತ್ರೆ, ಕೆ.ಆರ್.ನಗರ, ಮೈಸೂರು ಜಿಲ್ಲೆ |
| 20 | ಡಾಃ ಅನಿಲ್‌ಕುಮಾರ್ ಎಸ್. | ಪ್ರಾಆಕೇಂದ್ರ, ಕೋಟ, ಉಡುಪಿ ಜಿಲ್ಲೆ |
| 21 | ಡಾಃ ಮುರುಗೇಶ್ ಎಂ.ಎಸ್. | ಸಾರ್ವಜನಿಕ ಆಸ್ಪತ್ರೆ, ಹೊಸದುರ್ಗ, ಚಿತ್ರದುರ್ಗ ಜಿಲ್ಲೆ |
| 22 | ಡಾಃ ಮಂಜುನಾಥ ಬಿ., | ಪ್ರಾಆಕೇಂದ್ರ, ನುಗ್ಗೇಹಳ್ಳಿ,<br>ಚನ್ನರಾಯಪಟ್ಟಣ ತಾಃ, ಹಾಸನ ಜಿಲ್ಲೆ |
| 23 | ಡಾಃ ಚಂದ್ರಕಾಂತ್ ಕೆ.ಎಲ್. | ಪ್ರಾಆಕೇಂದ್ರ, ಮುರ್ನಾಡು, ಕೊಡಗು ಜಿಲ್ಲೆ |
| 24 | ಡಾಃ ಪಾರ್ವತಿ ಬಿ. | ಸಾರ್ವಜನಿಕ ಆಸ್ಪತ್ರೆ, ಮುಧೋಳ,<br>ಬಾಗಲಕೋಟೆ ಜಿಲ್ಲೆ |
| 25 | ಡಾಃ ರವಿಶಂಕರ ರೆಡ್ಡಿ | ಪ್ರಾಆಕೇಂದ್ರ, ಗುಡೇಕೋಟೆ, ಬಳ್ಳಾರಿ ಜಿಲ್ಲೆ |
| 26 | ಡಾಃ ಸುರೇಶ್ ಹೆಚ್.ಎಸ್. | ಪ್ರಾಆಕೇಂದ್ರ, ದೊಡ್ಡಮರಳವಾಡಿ,<br>ಕನಕಪುರ ತಾಃ ಬೆಂಗಳೂರು ಗ್ರಾ. ಜಿಲ್ಲೆ |
| 27 | ಡಾಃ ನಂದಿನಿ ಎಲ್. | ಪ್ರಾಆಕೇಂದ್ರ, ಆರೋಹಳ್ಳಿ, ಬಳ್ಳಾರಿ ಜಿಲ್ಲೆ |
| 28 | ಡಾಃ ಶ್ರೀಶೈಲ ಎಸ್.ಪಾಟೀಲ್ | ಪ್ರಾಆಕೇಂದ್ರ, ಐನಾಪುರ,<br>ಅಥಣಿ ತಾಃ, ಬೆಳಗಾಂ ಜಿಲ್ಲೆ |
| 29 | ಡಾಃ ವಸುಧಾ ಟಿ.ಕೆ. | ಪ್ರಾಆಕೇಂದ್ರ, ಕಿಕ್ಕೇರಿ,<br>ಕೆ.ಆರ್.ಪೇಟೆ ತಾಃ, ಮಂಡ್ಯ ಜಿಲ್ಲೆ |
| 30 | ಡಾಃ ಕೇಶವ ರಾವ್ ಕೆ.ಸಿ. | ಪ್ರಾಆಕೇಂದ್ರ, ಚಿಕ್ಕಬಸೂರು,<br>ಬ್ಯಾಡಗಿ ತಾಃ, ಹಾವೇರಿ ಜಿಲ್ಲೆ |
| 31 | ಡಾಃ ದೊರೆಸ್ವಾಮಿ ಜಿ.ಪಿ. | ಪ್ರಾಆಕೇಂದ್ರ, ಕೊಡಿಯಾಲ, ಮಂಡ್ಯ ಜಿಲ್ಲೆ |
| 32 | ಡಾಃ ನರಸಿಂಹಮೂರ್ತಿ ಡಿ.ಆರ್. | ಪ್ರಾಆಕೇಂದ್ರ, ಮುದ್ದೇನಹಳ್ಳಿ,<br>ಚಿಕ್ಕಬಳ್ಳಾಪುರ ತಾಃ, ಕೋಲಾರ ಜಿಲ್ಲೆ |
| 33 | ಡಾಃ ಮಹೇಶ, | ಪ್ರಾಆಕೇಂದ್ರ, ಚಟ್ಚಚನಹಳ್ಳಿ,<br>ಬೇಲೂರು ತಾಃ, ಹಾಸನ ಜಿಲ್ಲೆ |
| 34 | ಡಾಃ ವಿಷ್ಣುಮೂರ್ತಿ ಹೆಚ್.ವೈ. | ಪ್ರಾಆಕೇಂದ್ರ, ಭಾರತಿಬೈಲು,<br>ಚಿಕ್ಕಮಗಳೂರು ಜಿಲ್ಲೆ |
| 35 | ಡಾಃ ಸಂತೋಷ್ ಬಾಬು ಜಿ.ವಿ. | ಪ್ರಾಆಕೇಂದ್ರ, ಚೇಳೂರು,<br>ಬಾಗೇಪಲ್ಲಿ ತಾಃ, ಕೋಲಾರ ಜಿಲ್ಲೆ |
| 36 | ಡಾಃ ನಾಗರಾಜ ಎನ್.ಟಿ. | ಪ್ರಾಆಘಟಕ, ಮದ್ದೇರಿ, ಕೋಲಾರ ಜಿಲ್ಲೆ. |
| 37 | ಡಾಃ ಚನ್ನಗೌಡ ಪಾಟೀಲ್ | ಪ್ರಾಆಕೇಂದ್ರ, ಕೊಕಟನೂರು,<br>ಅಥಣಿ ತಾಃ, ಬೆಳಗಾಂ ಜಿಲ್ಲೆ |
| 38 | ಡಾಃ ಸುಮತಿ ಎಂ. | ಪ್ರಾಆಕೇಂದ್ರ, ದೊಮ್ಮಸಂದ್ರ,<br>ಆನೇಕಲ್ ತಾಃ, ಬೆಂಗಳೂರು ನಗರ ಜಿಲ್ಲೆ |
| 39 | ಡಾಃ ಚಿದಾನಂದ ಎಲ್. | ಪ್ರಾಆಕೇಂದ್ರ, ಹಾಲೂರು, ಹಾವೇರಿ ಜಿಲ್ಲೆ |
| 40 | ಡಾಃ ಮಂಜುಳ ಜೆ.ಎ. | ಪ್ರಾಆಕೇಂದ್ರ, ತಗ್ಗಹಳ್ಳಿ , ಮಂಡ್ಯ ತಾಲ್ಲೂಕು ಃ ಜಿಲ್ಲೆ |
| 41 | ಡಾಃ ಗೋವಿಂದರಾಜು ಜಿ. | ಪ್ರಾಆಕೇಂದ್ರ, ಬಿಸಲವಾಡಿ, ಚಾಮರಾಜನಗರ ಜಿಲ್ಲೆ |
| 42 | ಡಾಃ ಮಾಲತೇಶ್ ಗೌಡ ಪಿ. | ಪ್ರಾಆಕೇಂದ್ರ, ಕೆರೂರು, ಬಾಗಲಕೋಟೆ ಜಿಲ್ಲೆ |
| 43 | ಡಾಃ ಸುಷ್ಮಾ ಹೆಗ್ಡೆ ಎಸ್. | ಪ್ರಾಆಕೇಂದ್ರ, ಕೋಟ, ಉಡುಪಿ ಜಿಲ್ಲೆ |
| 44 | ಡಾಃ ಸುರೇಶ ಬಾಬು ಎಸ್.ಎನ್. | ಪ್ರಾಆಕೇಂದ್ರ, ಮಿಟ್ಟೆಮಾರಿ, ಕೋಲಾರ ಜಿಲ್ಲೆ |
| 45 | ಡಾಃ ಶೋಭಾ ನಾಗೇಶ್ | ಪ್ರಾಆಕೇಂದ್ರ, ಮಲ್ಲಸಂದ್ರ (ಹೆರಿಗೆ ವಿಭಾಗ),<br>ಬೆಂಗಳೂರು. |
| 46 | ಡಾಃ ಜಿತೇಂದ್ರ ಕುಟ್ಟೆ | ಪ್ರಾಆಕೇಂದ್ರ, ಅಮ್ಮನಗಿ,<br>ಹುಕ್ಕೇರಿ ತಾಃ, ಬೆಳಗಾಂ ಜಿಲ್ಲೆ |
| 47 | ಡಾಃ ಜಯಮಾಲ ಆರ್. | ಪ್ರಾಆಕೇಂದ್ರ, ನೊಣವಿನಕೆರೆ,<br>ತಿಪಟೂರು ತಾಃ, ತುಮಕೂರು ಜಿಲ್ಲೆ |
| 48 | ಡಾಃ ಸುನೀತಾ ಪಿ.ಚೆನ್ನಾಳ್ | ಪ್ರಾಆಕೇಂದ್ರ, ಚಾಂದ್‌ಕವಟೆ,<br>ಸಿಂಧಗಿ ತಾಃ, ಬಿಜಾಪುರ ಜಿಲ್ಲೆ |

| ಕ್ರಮ ಸಂಖ್ಯೆ | ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಯ ಹೆಸರು | ನೇಮಕಾತಿ ಮಾಡಿರುವ ಸ್ಥಳ |
|---|---|---|
| 49 | ಡಾಃ ಮೂರ್ಕಣ್ಣಪ್ಪ | ಸಾರ್ವಜನಿಕ ಆಸ್ಪತ್ರೆ, ಶಿಕಾರಿಪುರ ಶಿವಮೊಗ್ಗ ಜಿಲ್ಲೆ |
| 50 | ಡಾಃ ಕಾಡರಕೊಪ್ಪ ಪಿ. ವಿ. | ಪ್ರಾಆಕೇಂದ್ರ, ಶಿಲ್ವಾಡಿ, ನವಲಗುಂದ ತಾಲ್ಲೂಕು, ಧಾರವಾಡ ಜಿಲ್ಲೆ |
| 51 | ಡಾಃ ಮಂಜಪ್ಪ ಟಿ. | ಪ್ರಾಆಕೇಂದ್ರ, ಬೊಮ್ಮನಹಳ್ಳಿ, ಹಾನಗಲ್ ತಾಃ, ಹಾವೇರಿ ಜಿಲ್ಲೆ |
| 52 | ಡಾಃ ಶಾಂತ ಎ.ಆರ್. | ಸಾರ್ವಜನಿಕ ಆಸ್ಪತ್ರೆ, ಮುಳಬಾಗಿಲು, ಕೋಲಾರ ಜಿಲ್ಲೆ |
| 53 | ಡಾಃ ಬಸವಂತ ವೈ. ಹಳೆಮನೆ | ಪ್ರಾಆಕೇಂದ್ರ, ಸಾವಳಗಿ, ಜಮಖಂಡಿ ತಾಃ ಬಾಗಲಕೋಟೆ ಜಿಲ್ಲೆ |
| 54 | ಡಾಃ ಷಣ್ಮುಖಪ್ಪ ಎಸ್. | ಪ್ರಾಆಕೇಂದ್ರ, ತಿಳವಳ್ಳಿ, ಹಾನಗಲ್ ತಾಃ, ಹಾವೇರಿ ಜಿಲ್ಲೆ |
| 55 | ಡಾಃ ದೇವೆಂದ್ರಪ್ಪ ಕೆ.ಆರ್. | ಪ್ರಾಆಕೇಂದ್ರ, ಕೋಣಂದೂರು, ತೀರ್ಥಹಳ್ಳಿ ತಾಃ, ಶಿವಮೊಗ್ಗ ಜಿಲ್ಲೆ |
| 56 | ಡಾಃ ಅಶೋಕ ಎಂ.ಜಿ. | ಪ್ರಾಆಕೇಂದ್ರ, ಹಿತಲ, ಶಿಕಾರಿಪುರ ತಾಃ, ಶಿವಮೊಗ್ಗ ಜಿಲ್ಲೆ . |
| 57 | ಡಾಃ ಬಾಲಕೃಷ್ಣ ಜಿ.ಕೆ. | ಪ್ರಾಆಕೇಂದ್ರ, ಯಳವಾರ, ಬಸವನಬಾಗೇವಾಡಿ ತಾಃ, ಬಿಜಾಪುರ ಜಿಲ್ಲೆ . |
| 58 | ಡಾಃ ಚಂದ್ರಶೇಖರ ಜೆ.ಪಿ. | ಪ್ರಾಆಕೇಂದ್ರ, ಮಲ್ಲೇನಹಳ್ಳಿ, ಚಿಕ್ಕಮಗಳೂರು ಜಿಲ್ಲೆ |
| 59 | ಡಾಃ ಈಶ್ವರಪ್ಪ, ಎಂ. | ಪ್ರಾ.ಆ.ಕೇ., ಚಂಡಿಯಾ, ಉತ್ತರ ಕನ್ನಡ ಜಿಲ್ಲೆ |
| 60 | ಡಾಃ ಸುಧಾ ಬಿ.ಕೆ. | ಪ್ರಾ.ಆ.ಕೇ., ಜೀವನಭೀಮನಗರ, ಬೆಂಗಳೂರು (ನ) |
| 61 | ಡಾಃ ಕೃಷ್ಣಪ್ಪ ಬಿ.ಕೆ | ಪ್ರಾ.ಆ.ಕೇ., ದೊಂಬರದೊಡ್ಡಿ ಕ್ರಾಸ್, ಕನಕಪುರ ತಾಃ ಬೆಂಗಳೂರು(ಗ್ರಾ) |
| 62 | ಡಾಃ ಅಮರೇಶ್ ಎಂ.ಹೆಚ್. | ಸ.ಆ.ಕೇ. ಆನೇಕಲ್ ಬೆಂಗಳೂರು ನಗರ ಜಿಲ್ಲೆ |
| 63 | ಡಾಃ ಆಶಾ ಅಬಿಕರ್ | ಪ್ರಾ.ಆ.ಕೇಂದ್ರ, ಸರ್ವೆ, ಪುತ್ತೂರು ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ |
| 64 | ಡಾಃ ಆದಿನಾರಾಯಣ | ಪ್ರಾ.ಆ.ಕೇ. ಎರವತ್ತೂರು, ಉಡುಪಿ ಜಿಲ್ಲೆ |
| 65 | ಡಾಃ ರಂಗನಾಥ ಆರ್. | ಪ್ರಾ.ಆ.ಕೇ. ಭರಮಸಾಗರ, ಚಿತ್ರದುರ್ಗ ಜಿಲ್ಲೆ |
| 66 | ಡಾಃ ಕುಲಕರ್ಣಿ ಕೆ.ಎಸ್ | ಪ್ರಾ.ಆ.ಕೇ. ಬೊಮ್ಮನಹಳ್ಳಿ, ಹಾನಗಲ್ ತಾಲ್ಲೂಕು, ಹಾವೇರಿ ಜಿಲ್ಲೆ |
| 67 | ಡಾಃ ತಿರುಪತಿ ವಿ. | ಪ್ರಾ.ಆ.ಕೇ., ಬೈಲೂರು, ಬೈಲಹೊಂಗಲ ತಾಃ ಬೆಳಗಾಂ ಜಿಲ್ಲೆ |
| 68 | ಡಾಃ ರೋಚನಾ ಎಂ.ಸಿ. | ಪ್ರಾ.ಆ.ಕೇ., ಗೆಜ್ಜಲಗೆರೆ, ಮಂಡ್ಯ ಜಿಲ್ಲೆ |
| 69 | ಡಾಃ ವಾಣಿ ವಿ.ಚೈನಿ | ಸಮುದಾಯ ಆರೋಗ್ಯ ಕೇಂದ್ರ, ಅಥಣಿ, ಬೆಳಗಾಂ ಜಿಲ್ಲೆ |
| 70 | ಡಾಃ ಪ್ರತಾಪ್ ಜನಾರ್ಧನ್ ರಾವ್ ಬಿರಾದಾರ್ | ಪ್ರಾ.ಆ.ಕೇಂದ್ರ, ಮಂಠಾಲಾ, ಬೀದರ್ ಜಿಲ್ಲೆ |
| 71 | ಡಾಃ ಗಿರೀಶ್ ಆರ್. | ಪ್ರಾ.ಆ.ಕೇಂದ್ರ, ಕಣ್ಣಂಗಾಲ, ವೀರಾಜಪೇಟೆ ತಾಃ ಕೊಡಗು ಜಿಲ್ಲೆ |
| 72 | ಡಾಃ ರವಿಕೀರ್ತಿ ಜಿ. | ಡಾಃ ರವಿಕೀರ್ತಿ ಜಿ. ಸಾ.ಆ., ತರಿಕೆರೆ, ಚಿಕ್ಕಮಗಳೂರು |
| 73 | ಡಾಃ ಭಾಸ್ಕರ ಎಸ್.ಕೋಟ್ಯಾನ್ | ಪ್ರಾ.ಆ.ಕೇಂದ್ರ ಅತ್ತೂರ್‌ಕೆಮ್ರಾಲ್, ದಕ್ಷಿಣ ಕನ್ನಡ ಜಿಲ್ಲೆ |
| 74 | ಡಾಃ ಪ್ರಫುಲ್ಲಾ ಎ.ಎಸ್. | ಪ್ರಾ.ಆ.ಕೇ, ಕೇರಳಾಪುರ, ಅರಕಲಗೂಡು ತಾಃ ಹಾಸನ ಜಿಲ್ಲೆ |
| 75 | ಡಾಃ ಉಮಾ ಸಿ.ಕೆ. | ಸಾರ್ವಜನಿಕ ಆಸ್ಪತ್ರೆ, ಸಕಲೇಶಪುರ, ಹಾಸನ ಜಿಲ್ಲೆ |
| 76 | ಡಾಃ ಜಯಶೇಖರ್ ಎಂ. | ಸಾರ್ವಜನಿಕ ಆಸ್ಪತ್ರೆ, ಪುತ್ತೂರು ದಕ್ಷಿಣ ಕನ್ನಡ ಜಿಲ್ಲೆ |

| ಕ್ರಮ ಸಂಖ್ಯೆ | ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಯ ಹೆಸರು | ನೇಮಕಾತಿ ಮಾಡಿರುವ ಸ್ಥಳ |
|---|---|---|
| 77 | ಡಾಃ ರಶ್ಮಿ ಕೆ.ಎಸ್. | ಪ್ರಾ.ಆ.ಕೇಂದ್ರ, ಇಡ್ಗೂರ್, ಗುಬ್ಬಿ ತಾಲ್ಲೂಕು, ತುಮಕೂರು ಜಿಲ್ಲೆ |
| 78 | ಡಾಃ ಚಂದ್ರಶೇಖರ್ ಬಿ.ಎಸ್. | ಸಾರ್ವಜನಿಕ ಆಸ್ಪತ್ರೆ, ಮಧುಗಿರಿ, ತುಮಕೂರು ಜಿಲ್ಲೆ |
| 79 | ಡಾಃ ಹನುಮಂತ ಕಲ್ಮಾಡಿ | ಸ.ಆ.ಕೇ. ಹಿಪ್ಪರಗಿ, ಬಾಗಲಕೋಟೆ ಜಿಲ್ಲೆ |
| 80 | ಡಾಃ ಶಿವರಾಮಕೃಷ್ಣ ಎಂ.ಡಿ. | ಪ್ರಾ.ಆಕೇ. ಕೀಳನಪುರ, ಮೈಸೂರು ಜಿಲ್ಲೆ |
| 81 | ಡಾಃ ಪ್ರಕಾಶ್ ಎಸ್. ನಾಯಕ್ | ಪ್ರಾ.ಆ.ಕೇಂದ್ರ, ರಟ್ಟಿಹಳ್ಳಿ, ಹಾವೇರಿ ಜಿಲ್ಲೆ |
| 82 | ಡಾಃ ರವೀಂದ್ರನಾಥ್ ಎಸ್. | ಪ್ರಾ.ಆ.ಕೇಂದ್ರ, ವಾಟದಹೊಸಹಳ್ಳಿ, ಗೌರಿಬಿದನೂರು ತಾಃ ಕೋಲಾರ ಜಿಲ್ಲೆ |
| 83 | ಡಾಃ ಬಸವರಾಜ ಹೆಚ್.ಸಿ. | ಪ್ರಾ.ಆ.ಘಟಕ, ಗುಂಡೇರಿ, ಚಿತ್ರದುರ್ಗ ಜಿಲ್ಲೆ |
| 84 | ಡಾಃ ಜನಾರ್ಧನ ಡಿ.ಎಂ. | ಸಾರ್ವಜನಿಕ ಆಸ್ಪತ್ರೆ, ಭಟ್ಕಳ, ಉತ್ತರ ಕನ್ನಡ ಜಿಲ್ಲೆ |
| 85 | ಡಾಃ ಲತಾ ಎಸ್. ಸಂಗೋಜಿ | ಪ್ರಾ.ಆ.ಕೇಂದ್ರ, ಹಿರೇಬೆಂಡಿಯನೂರು, ಹಾವೇರಿ ಜಿಲ್ಲೆ |
| 86 | ಡಾಃ ವಸಂತಲಕ್ಷ್ಮಿ ಎ.ವಿ. | ಪ್ರಾ.ಆ.ಕೇಂದ್ರ, ಚೀಣ್ಯಾ ನಾಗಮಂಗಲ ತಾಲ್ಲೂಕು, ಮಂಡ್ಯ ಜಿಲ್ಲೆ |
| 87 | ಡಾಃ ವೇಣುಗೋಪಾಲ್ ಆರ್.ಸಿ. | ಪ್ರಾ.ಆ.ಕೇ. ಪಿ.ಜಿ.ಪಾಳ್ಯ ಕೊಳ್ಳೇಗಾಲ ತಾಃ, ಚಾಮರಾಜನಗರ ಜಿಲ್ಲೆ |
| 88 | ಡಾಃ ಹಾವನೂರು ಪಿ.ಆರ್. | ಪ್ರಾ.ಆ.ಕೇಂದ್ರ, ಕಬ್ಬೂರು, ಹಾವೇರಿ ಜಿಲ್ಲೆ |
| 89 | ಡಾಃ ಸೋಮಶೇಖರ್ ಹೆಚ್.ಕೆ. | ಜಿಲ್ಲಾ ಆಸ್ಪತ್ರೆ, ಮಡಿಕೇರಿ ಕೊಡಗು ಜಿಲ್ಲೆ |
| 90 | ಡಾಃ ಬಸವರಾಜ ಒಲೇಕರ್ | ಪ್ರಾ.ಆ.ಕೇಂದ್ರ, ಕರಮಂಡಲಗಿ, ಹಾವೇರಿ ಜಿಲ್ಲೆ |
| 91 | ಡಾಃ ಗಾಯಿತ್ರಿ ಜಿ. | ಸಾರ್ವಜನಿಕ ಆಸ್ಪತ್ರೆ, ನಂಜನಗೂಡು, ಮೈಸೂರು ಜಿಲ್ಲೆ |
| 92 | ಡಾಃ ಮಹಾದೇವಸ್ವಾಮಿ ಎಸ್.ಸಿ. | ಪ್ರಾ.ಆ.ಕೇ. ಮಾಲಂಗಿ, ಟಿ.ನರಸೀಪುರ ತಾಃ ಮೈಸೂರು ಜಿಲ್ಲೆ |
| 93 | ಡಾಃ ತ್ರಿಮೂರ್ತಿ ವಿ.ಕೆ. | ಪ್ರಾ.ಆ.ಕೇಂದ್ರ, ಕಡಬ, ಪುತ್ತೂರು ತಾಃ ದಕ್ಷಿಣ ಕನ್ನಡ ಜಿಲ್ಲೆ |
| 94 | ಡಾಃ ದೇವರಾಜು ಕೆ. | ಪ್ರಾ.ಆ.ಕೇಂದ್ರ, ಪಾಣಾಜೆ, ಪುತ್ತೂರು ತಾಃ ದಕ್ಷಿಣ ಕನ್ನಡ ಜಿಲ್ಲೆ |
| 95 | ಡಾಃ ಮೋಹನಕುಮಾರ್ ಕೆ.ಆರ್. | ಪ್ರಾ.ಆ.ಘಟಕ, ಹುಣಸನಹಳ್ಳಿ, ಕನಕಪುರ ತಾಃ ಬೆಂಗಳೂರು (ಗ್ರಾ) |
| 96 | ಡಾಃ ನಂಜುಂಡಯ್ಯ ಎನ್. | ಪ್ರಾ.ಆ.ಕೇಂದ್ರ, ಕ್ಯಾದಗಿ, ಸಿದ್ದಾಪುರ ತಾಃ, ಉತ್ತರ ಕನ್ನಡ ಜಿಲ್ಲೆ |
| 97 | ಡಾಃ ಕಗ್ಗಲಗೌಡರ್ | ಪ್ರಾ.ಆ.ಕೇಂದ್ರ, ಅರಳಿಕಟ್ಟಿ, ಹುಬ್ಬಳ್ಳಿ ತಾಲ್ಲೂಕು, ಧಾರವಾಡ ಜಿಲ್ಲೆ |
| 98 | ಡಾಃ ಮಲ್ಲಪ್ಪ ಜಿ. | ಪ್ರಾ.ಆ.ಕೇಂದ್ರ, ತಾವರೆಕೆರೆ, ಚನ್ನಗಿರಿ ತಾಃ ದಾವಣಗೆರೆ ಜಿಲ್ಲೆ |
| 99 | ಡಾಃ ಸೋಮಶೇಖರ್ ಎಸ್. | ಪ್ರಾ.ಆ.ಕೇಂದ್ರ, ಅನ್ನೂರು, ಹೆಚ್.ಡಿ.ಕೋಟೆ ತಾಃ ಮೈಸೂರು ಜಿಲ್ಲೆ |
| 100 | ಡಾಃ ಆನಂದ್ ಕೆ.ಗೊಟ್ಟೂರು | ಜಿಲ್ಲಾ ಕುಟುಂಬ ಕಲ್ಯಾಣ ಅಧಿಕಾರಿ, ಕೊಪ್ಪಳ ಜಿಲ್ಲೆ |
| 101 | ಡಾಃ ಸಾಕಮ್ಮ ಎ. | ಬೆಂಗಳೂರು ವೈದ್ಯಕೀಯ ಮಹಾವಿದ್ಯಾಲಯಕ್ಕೆ ಹೊಂದಿಕೊಂಡಿರುವ ಪಿಪಿಸಿ |
| 102 | ಡಾಃ ಜಗನ್ನಾಥ ಬಿ.ಸಿ. | ಪ್ರಾ.ಆ.ಕೇಂದ್ರ, ಬಡವನಹಳ್ಳಿ, ಮಧುಗಿರಿ ತಾಃ ತುಮಕೂರು ಜಿಲ್ಲೆ |
| 103 | ಡಾಃ ನಾಗರಾಜ ಜಿ.ಓ. | ಪ್ರಾ.ಆ.ಕೇಂದ್ರ, ಮುದ್ದಾಪುರ, ಚಿತ್ರದುರ್ಗ ಜಿಲ್ಲೆ |
| 104 | ಡಾಃ ನರಸಿಂಹ ನಾಯಕ್ | ಪ್ರಾ.ಆ.ಕೇಂದ್ರ, ಅಜೆಕಾರು, ಕಾರ್ಕಳ ತಾಲ್ಲೂಕು, ಉಡುಪಿ ಜಿಲ್ಲೆ |

| ಕ್ರಮ ಸಂಖ್ಯೆ | ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಯ ಹೆಸರು | ನೇಮಕಾತಿ ಮಾಡಿರುವ ಸ್ಥಳ |
|---|---|---|
| 105 | ಡಾಃ ನವೀನ್‌ಚಂದ್ರ ಎಸ್. | ಪ್ರಾ.ಆ.ಕೇಂದ್ರ, ಬೆಳ್ಳಾಳೆ,<br>ಪಾಂಡವಪುರ ತಾಲ್ಲೂಕು, ಮಂಡ್ಯ ಜಿಲ್ಲೆ |
| 106 | ಡಾಃ ಚಂದ್ರಶೇಖರಯ್ಯ | ಪ್ರಾ.ಆ.ಕೇಂದ್ರ, ದಳಸನೂರು,<br>ಶ್ರೀನಿವಾಸಪುರ ತಾಃ ಕೋಲಾರ ಜಿಲ್ಲೆ |
| 107 | ಡಾಃ ಯಲ್ಲಪ್ಪ ಆರ್.ಬಿ. | ಪ್ರಾ.ಆ.ಕೇಂದ್ರ, ಕರೂರು,<br>ಬಳ್ಳಾರಿ ಜಿಲ್ಲೆ |
| 108 | ಡಾಃ ತ್ರಿವೇಣಿ ಕೆ. | ಪ್ರಾ.ಆ.ಕೇಂದ್ರ, ಗರ್ಗೇಶ್ವರಿ,<br>ಟಿ.ನರಸೀಪುರ ತಾಃ ಮೈಸೂರು ಜಿಲ್ಲೆ |
| 109 | ಡಾಃ ಲಿಂಗರಾಜು ಟಿ. | ಸಾರ್ವಜನಿಕ ಆಸ್ಪತ್ರೆ, ಮುನಿರಾಬಾದ್, ಕೊಪ್ಪಳ ಜಿಲ್ಲೆ |
| 110 | ಡಾಃ ಶಂಕರಪ್ಪ ವಿ.ಎಸ್. | ಪ್ರಾ.ಆ.ಕೇ. ಕಲ್‌ಸಾದರಹಳ್ಳಿ, ಹಾಸನ ಜಿಲ್ಲೆ |
| 111 | ಡಾಃ ಮಂಜುಳ | ಸಾರ್ವಜನಿಕ ಆಸ್ಪತ್ರೆ, ಮುಳಬಾಗಿಲು, ಕೋಲಾರ ಜಿಲ್ಲೆ |
| 112 | ಡಾಃ ರೇವಣ್ಣ ಎಂ. | ಪ್ರಾ.ಆ.ಕೇಂದ್ರ, ಹತ್ಯಡ್ಕ,<br>ಬೆಳ್ತಂಗಡಿ ತಾಃ ದಕ್ಷಿಣ ಕನ್ನಡ ಜಿಲ್ಲೆ |
| 113 | ಡಾಃ ಸುರೇಶ್ ಕೆ.ಹೆಚ್. | ಸಂಯುಕ್ತ ಆಸ್ಪತ್ರೆ, ಆನಂದಪುರ, ಶಿವಮೊಗ್ಗ ಜಿಲ್ಲೆ |
| 114 | ಡಾಃ ವೀರಪ್ಪ ಬಿ.ಕೆ. | ಪ್ರಾ.ಆ.ಘಟಕ, ಹಳೇಕಲ್ಲು,<br>ಜಗಳೂರು ತಾಃ ಚಿತ್ರದುರ್ಗ ಜಿಲ್ಲೆ |
| 115 | ಡಾಃ ಮನೋಹರ್ ಪತ್ತಾರ್ | ಪ್ರಾ.ಆ.ಕೇಂದ್ರ, ಮುದಗಲ್,<br>ಲಿಂಗಸೂಗೂರು ತಾಃ, ರಾಯಚೂರು ಜಿಲ್ಲೆ |
| 116 | ಡಾಃ ಶಿವಕುಮಾರ ಇ. | ಪ್ರಾ.ಆ.ಘಟಕ, ಶಿವಪುರ,<br>ಹೊಳಲ್ಕೆರೆ ತಾಃ ಚಿತ್ರದುರ್ಗ ಜಿಲ್ಲೆ |
| 117 | ಡಾಃ ಕಮಲಮ್ಮ ಬಿ. | ಪ್ರಾ.ಆ.ಕೇಂದ್ರ, ಕಮಲಾಪುರ, ಬಳ್ಳಾರಿ ಜಿಲ್ಲೆ |
| 118 | ಡಾಃ ನಾಗೇಶ್ ಕೆ. | ಪ್ರಾ.ಆ.ಕೇಂದ್ರ, ಹಿರೇಗುಂಟನೂರು, ಚಿತ್ರದುರ್ಗ ಜಿಲ್ಲೆ |
| 119 | ಡಾಃ ಕುಮಾರಸ್ವಾಮಿ ಬಿ.ಜಿ. | ಪ್ರಾ.ಆ.ಕೇಂದ್ರ, ಕಳ್ಳಂಬೆಳ್ಳ<br>ಶಿರಾ ತಾಲ್ಲೂಕು, ತುಮಕೂರು ಜಿಲ್ಲೆ |
| 120 | ಡಾಃ ನಾಗರಾಜ ನಾಯಕ್ ಎಲ್. | ಪ್ರಾ.ಆ.ಕೇಂದ್ರ, ಹೊತ್ತನಕಟ್ಟೆ,<br>ಶಿಕಾರಿಪುರ ತಾಃ ಶಿವಮೊಗ್ಗ ಜಿಲ್ಲೆ |
| 121 | ಡಾಃ ಮಲ್ಲಪ್ಪ ಕೆ.ಪಿ. | ಪ್ರಾ.ಆ.ಕೇಂದ್ರ, ಐಮಂಗಲ, ಚಿತ್ರದುರ್ಗ ಜಿಲ್ಲೆ |
| 122 | ಡಾಃ ಬಸವರಾಜು ಕೆ. | ಶಾಸಕರ ಭವನ ಚಿಕಿತ್ಸಾಲಯ, ಬೆಂಗಳೂರು |
| 123 | ಡಾಃ ಸುರೇಶ್ ಎಂ. | ಪ್ರಾ.ಆ.ಕೇಂದ್ರ, ನರಸಾಪುರ,<br>ಕೋಲಾರ ತಾಲ್ಲೂಕು ಃ ಜಿಲ್ಲೆ |
| 124 | ಡಾಃ ನಾಗಕನ್ಯೆ ಜಿ. | ಪ್ರಾ.ಆ.ಕೇಂದ್ರ, ಉದಯಗಿರಿ, ಮೈಸೂರು ಜಿಲ್ಲೆ |
| 125 | ಡಾಃ ಸುರೇಶ್ ವಾಲ್ಚಂದ್ | ಪ್ರಾ.ಆ.ಕೇಂದ್ರ, ಸ್ಟೇಷನ್ ಗಾಣಗಾಪುರ, ಗುಲ್ಬರ್ಗಾ ಜಿಲ್ಲೆ |
| 126 | ಡಾಃ ತುಳಸಿ ನಾಯಕ್ ಡಿ. | ಸಿ.ಜಿ. ಆಸ್ಪತ್ರೆ, ದಾವಣಗೆರೆ |
| 127 | ಡಾಃ ಚಂದ್ರಪ್ಪ ಡಿ.ಎಸ್. | ಪ್ರಾ.ಆ.ಕೇಂದ್ರ, ಬೆಳಘಟ್ಟ, ಬಳ್ಳಾರಿ ಜಿಲ್ಲೆ |
| 128 | ಡಾಃ ಶ್ರೀಧರ ಕೆ.ಜಿ. | ಪ್ರಾ.ಆ.ಘಟಕ, ರೇವಣಕಟ್ಟ,<br>ಶಿರಸಿ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ. |
| 129 | ಡಾಃ ಮಂಜುಳಾ ಆರ್. | ಕಾರ್ಪೊರೇಷನ್ ಮೆಟರ್ನಿಟಿ ಹೋಂ, ತಿಮ್ಮಯ್ಯ ರಸ್ತೆ<br>ಬೆಂಗಳೂರು |
| 130 | ಡಾಃ ನಾರಾಯಣಸ್ವಾಮಿ ಎ.ವಿ. | ಪ್ರಾ.ಆ.ಕೇಂದ್ರ, ಮುತ್ತುಕದ ಹಳ್ಳಿ, ಶ್ರೀನಿವಾಸಪುರ ತಾಲ್ಲೂಕು,<br>ಕೋಲಾರ ಜಿಲ್ಲೆ. |
| 131 | ಡಾಃ ಬಾಬುರಾವ್ | ಪ್ರಾ.ಆ.ಕೇಂದ್ರ ನಿರ್ನಾ, ಬೀದರ್ ಜಿಲ್ಲೆ. |
| 132 | ಡಾಃ ಶಾಂತ ಹೊಸಮನಿ | ಪ್ರಾ.ಆ.ಕೇಂದ್ರ, ಕೊಂಡಜ್ಜಿ ,<br>ಹರಿಹರ ತಾಲ್ಲೂಕು, ದಾವಣಗೆರೆ ಜಿಲ್ಲೆ |
| 133 | ಡಾಃ ರಮೇಶ | ಜಿಲ್ಲಾ ಆಸ್ಪತ್ರೆ, ಕಾರವಾರ ಉತ್ತರ ಕನ್ನಡ. |

| ಕ್ರಮ ಸಂಖ್ಯೆ | ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಯ ಹೆಸರು | ನೇಮಕಾತಿ ಮಾಡಿರುವ ಸ್ಥಳ |
|---|---|---|
| 134 | ಡಾಃ ಪುಷ್ಪಾವತಿ ಎನ್.ಎಸ್. | ಪ್ರಾ.ಆ.ಕೇಂದ್ರ, ಭಾರತ್ ಕಾಲೋನಿ, ದಾವಣಗೆರೆ ಜಿಲ್ಲೆ |
| 135 | ಡಾಃಬಸವರಾಜು ಕೆ.ಹೆಚ್. | ಪ್ರಾ.ಆ.ಕೇಂದ್ರ, ಹಲಗನಹಳ್ಳಿ, ಪಿರಿಯಾಪಟ್ಟಣ ತಾಲ್ಲೂಕು, ಮೈಸೂರು ಜಿಲ್ಲೆ |
| 136 | ಡಾಃ ಕಿಶೋರ್‌ಕುಮಾರ್ ರಾವ್ | ಪ್ರಾ.ಆ.ಕೇಂದ್ರ, ಇನ್ನಾ, ಕಾರ್ಕಳ ತಾಲ್ಲೂಕು, ಉಡುಪಿ ಜಿಲ್ಲೆ |
| 137 | ಡಾಃ ಎಂ.ಡಿ.ಖಾಜಾ ಮೊಹಿದ್ದೀನ್ | ಪ್ರಾ.ಆ.ಕೇಂದ್ರ, ಪಾಮನಕಲ್ಲೂರ್, ರಾಯಚೂರು ಜಿಲ್ಲೆ |
| 138 | ಡಾಃ ವಿದ್ಯಾವತಿ ಪಿ. ಅಮ್ಮಿನಬಾವಿ | ಸಾರ್ವಜನಿಕ ಆಸ್ಪತ್ರೆ, ರಾಮದುರ್ಗ, ಬೆಳಗಾಂ ಜಿಲ್ಲೆ |
| 139 | ಡಾಃ ಸೌಮ್ಯ ಜ್ಯೋಸ್ನಾ ಎಸ್. | ಸಿ.ಜಿ.ಆಸ್ಪತ್ರೆ, ದಾವಣಗೆರೆ |
| 140 | ಡಾಃ ಗೀತ ಹಲಕಟ್ಟಿ | ಪ್ರಾ.ಆ.ಕೇಂದ್ರ, ಕುಲ್ಗೋಡು, ಬೆಳಗಾಂ ಜಿಲ್ಲೆ |
| 141 | ಡಾಃ ಸಂತೋಷ್ ಪ್ರಭ | ಪ್ರಾಆಕೇಂದ್ರ, ಹಳ್ಳಿಖೇಡ್(ಬಿ) ಹುಮ್ನಾಬಾದ್ ತಾಲ್ಲೂಕು, ಬೀದರ್ ಜಿಲ್ಲೆ. |

ಎಸ್.ಕೆ.ತೆಗ್ಗಿನಮನಿ
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರಭಾರ),
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

ಸರ್ಕಾರಿ ಆದೇಶ ಸಂಖ್ಯೆಃ ಆಕುಕ 939 ಹೆಚ್‌ಎಸ್‌ಹೆಚ್ 2003 ದಿನಾಂಕಃ 14 -07-2005 ಕ್ಕೆ ಅನುಬಂಧ-II

| ಕ್ರಮ ಸಂಖ್ಯೆ | ದಂತ ಆರೋಗ್ಯಾಧಿಕಾರಿ ಹೆಸರು | ನೇಮಕಾತಿ ಮಾಡಿರುವ ಸ್ಥಳ |
|---|---|---|
| 1 | ಡಾಃ ಸಮೀರ್ ಸಿ.ಎಂ. | ಸಾರ್ವಜನಿಕ ಆಸ್ಪತ್ರೆ, ವೀರಾಜಪೇಟೆ, ಮಡಿಕೇರಿ. |
| 2 | ಡಾಃ ಕೇಶವ ಉಪೇಂದ್ರ ಭಟ್ | ಸಾರ್ವಜನಿಕ ಆಸ್ಪತ್ರೆ, ಸಿರ್ಸಿ, ಕಾರವಾರ, ಉ.ಕ.ಜಿಲ್ಲೆ |
| 3 | ಡಾಃ ಶ್ರೀಕಾಂತ್ | ಸಾರ್ವಜನಿಕ ಆಸ್ಪತ್ರೆ, ಮಾಗಡಿ, ಬೆಂಗಳೂರು ಗ್ರಾ. ಜಿಲ್ಲೆ |
| 4 | ಡಾಃ ನಾಗೇಂದ್ರಗುಪ್ತ ವಿ.ಆರ್. | ಸಾರ್ವಜನಿಕ ಆಸ್ಪತ್ರೆ, ಚಿಕ್ಕಬಳ್ಳಾಪುರ, ಕೋಲಾರ ಜಿಲ್ಲೆ |
| 5 | ಡಾಃ ವೀರಾ ರೆಡ್ಡಿ | ವಿಮ್ಸ್, ಬಳ್ಳಾರಿ (ಜಿಲ್ಲಾ ಆಸ್ಪತ್ರೆ, ಬಳ್ಳಾರಿ) |
| 6 | ಡಾಃ ರವಿ ಎಂ.ಜಿ. | ಸಾರ್ವಜನಿಕ ಆಸ್ಪತ್ರೆ, ಅಂಕೋಲ, ಕಾರವಾರ |
| 7 | ಡಾಃ ಜಯದೀಪ್ ಎನ್.ಎ. | ಸಾರ್ವಜನಿಕ ಆಸ್ಪತ್ರೆ, ಬಂಟ್ವಾಳ, ದಕ್ಷಿಣ ಕನ್ನಡ ಜಿಲ್ಲೆ |
| 8 | ಡಾಃ ಜಿ.ಎಸ್. ವೇಣುಗೋಪಾಲ | ಸಾರ್ವಜನಿಕ ಆಸ್ಪತ್ರೆ, ಚಿಂತಾಮಣಿ, ಕೋಲಾರ ಜಿಲ್ಲೆ |
| 9 | ಡಾಃ ನಾರಾಯಣ ರೆಡ್ಡಿ | ಸಾರ್ವಜನಿಕ ಆಸ್ಪತ್ರೆ, ಚಳ್ಳಕೆರೆ, ಚಿತ್ರದುರ್ಗ ಜಿಲ್ಲೆ |
| 10 | ಡಾಃ ಹೇಮಲತ ಬಿ.ಆರ್. | ಸಾರ್ವಜನಿಕ ಆಸ್ಪತ್ರೆ, ಗುಬ್ಬಿ, ತುಮಕೂರು ಜಿಲ್ಲೆ |
| 11 | ಡಾಃ ಮಂಜುನಾಥ ಬಿ.ಕೆ. | ಸಾರ್ವಜನಿಕ ಆಸ್ಪತ್ರೆ, ಸಿರಾ, ತುಮಕೂರು ಜಿಲ್ಲೆ |
| 12 | ಡಾಃ ಸಮಿವುಲ್ಲಾ ಷರೀಫ್ ಎಸ್.ಎ. | ಸಾರ್ವಜನಿಕ ಆಸ್ಪತ್ರೆ, ಬನ್ನೂರು, ಮೈಸೂರು ಜಿಲ್ಲೆ |
| 13 | ಡಾಃ ಪುಷ್ಪಲತಾ ಸಿ.ವಿ. | ಸಾರ್ವಜನಿಕ ಆಸ್ಪತ್ರೆ, ಗುಡಿಬಂಡೆ, ಕೋಲಾರ ಜಿಲ್ಲೆ |
| 14 | ಡಾಃ ಶಾಂತಲಾ ಕೆ.ಎಸ್. | ಜಿಲ್ಲಾ ಆಸ್ಪತ್ರೆ, ಧಾರವಾಡ |
| 15 | ಡಾಃ ನವೀನ್ ಸಿ.ಆರ್. | ಸಾರ್ವಜನಿಕ ಆಸ್ಪತ್ರೆ, ತುರುವೇಕೆರೆ, ತುಮಕೂರು |
| 16 | ಡಾಃ ಲೀಲಾ ನಾಡಗೌಡ | ಸಾರ್ವಜನಿಕ ಆಸ್ಪತ್ರೆ, ಹುಕ್ಕೇರಿ, ಬೆಳಗಾಂ |
| 17 | ಡಾಃ ಶಶಿಕಿರಣ ಜೆ. | ಸಾರ್ವಜನಿಕ ಆಸ್ಪತ್ರೆ, ಚನ್ನರಾಯಪಟ್ಟಣ, ಹಾಸನ |

| ಕ್ರಮ ಸಂಖ್ಯೆ | ದಂತ ಆರೋಗ್ಯಾಧಿಕಾರಿ ಹೆಸರು | ನೇಮಕಾತಿ ಮಾಡಿರುವ ಸ್ಥಳ |
|---|---|---|
| 18 | ಡಾಃ ರಂಜನಿ ಕೆ.ವಿ. | ಸಾರ್ವಜನಿಕ ಆಸ್ಪತ್ರೆ, ತಲಕಾಡು, ಮೈಸೂರು |
| 19 | ಡಾಃ ಮುಷಾಕಿರ್ ಹುಸೇನ್ | ಸಾರ್ವಜನಿಕ ಆಸ್ಪತ್ರೆ, ಶೃಂಗೇರಿ, ಚಿಕ್ಕಮಗಳೂರು ಜಿಲ್ಲೆ |
| 20 | ಡಾಃ ಬಸವನಗೌಡ ಸಿ.ಪಾಟೀಲ್ | ಸರ್ಕಾರಿ ದಂತ ಮಹಾವಿದ್ಯಾಲಯ, ಬೆಂಗಳೂರು (ಸ್ನಾತಕೋತ್ತರ ವ್ಯಾಸಂಗ) |
| 21 | ಡಾಃ ನಿರ್ಮಲಾ ರೆಡ್ಡಿ, ಕೆ. | ಸಾರ್ವಜನಿಕ ಆಸ್ಪತ್ರೆ, ಸಿಂಧನೂರು, ರಾಯಚೂರು. |
| 22 | ಡಾಃ ಸುನಿಲ್ ಪೂಜಾರಿ | ಸಾರ್ವಜನಿಕ ಆಸ್ಪತ್ರೆ, ಮುಧೋಳ್, ಬಾಗಲಕೋಟೆ ಜಿಲ್ಲೆ |
| 23 | ಡಾಃ ಮಲ್ಲನ ಗೌಡ ಬಿ.ಪಿ. | ಸಾರ್ವಜನಿಕ ಆಸ್ಪತ್ರೆ, ರಾಣೇಬೆನ್ನೂರು, ಹಾವೇರಿ |
| 24 | ಡಾಃ ದಾಕ್ಷಾಯಿಣಿ ಟಿ.ಡಿ. | ಸಾರ್ವಜನಿಕ ಆಸ್ಪತ್ರೆ, ಬ್ಯಾಡಗಿ, ಹಾವೇರಿ ಜಿಲ್ಲೆ |
| 25 | ಡಾಃ ಮಂಜುಳಾ ಎಂ. | ಸಾರ್ವಜನಿಕ ಆಸ್ಪತ್ರೆ, ಯಳಂದೂರು, ಚಾಮರಾಜನಗರ ಜಿಲ್ಲೆ |
| 26 | ಡಾಃ ಸುಮಾ ವೈ. | ಸಾರ್ವಜನಿಕ ಆಸ್ಪತ್ರೆ, ಹೊಸದುರ್ಗ, ಚಿತ್ರದುರ್ಗ ಜಿಲ್ಲೆ |
| 27 | ಡಾಃ ಅನಿಲ್ ಧಾವನ್ ಇ. | ಜಿಲ್ಲಾ ಆಸ್ಪತ್ರೆ, ಮಡಿಕೇರಿ, ಕೊಡಗು ಜಿಲ್ಲೆ |
| 28 | ಡಾಃ ಶ್ರೀನಾಥ್ ಎಸ್.ಕೆ. | ಸರ್ಕಾರಿ ದಂತ ಮಹಾವಿದ್ಯಾಲಯ, ಬೆಂಗಳೂರು |
| 29 | ಡಾಃ ಮೋಹನ್ ಆರ್. ಸಕ್ರಿ | ಎಸ್‌ಡಿಎಂ ದಂತ ಕಾಲೇಜು, ಧಾರವಾಡ (ಸ್ನಾತಕೋತ್ತರ ವ್ಯಾಸಂಗ) |
| 30 | ಡಾಃ ರೋಸಮ್ಮ ಜಾರ್ಜ್ | ಸಾರ್ವಜನಿಕ ಆಸ್ಪತ್ರೆ, ಆಲೂರು, ಹಾಸನ ಜಿಲ್ಲೆ |
| 31 | ಡಾಃ ಯೋಗೇಂದ್ರ ನಾಯ್ಕ ಜೆ.ಆರ್. | ಜಿಲ್ಲಾ ಆಸ್ಪತ್ರೆ, ಚಿಕ್ಕಮಗಳೂರು. |
| 32 | ಡಾಃ ಶೋಭಾ ಕೆ.ಎಂ. | ಸಾರ್ವಜನಿಕ ಆಸ್ಪತ್ರೆ, ಹಿರಿಯೂರು, ಚಿತ್ರದುರ್ಗ ಜಿಲ್ಲೆ |
| 33 | ಡಾಃ ರಶ್ಮಿ ಎಸ್. | ಸಾರ್ವಜನಿಕ ಆಸ್ಪತ್ರೆ, ಸುಳ್ಯ ಮಂಗಳೂರು, ದಕ್ಷಿಣ ಕನ್ನಡ ಜಿಲ್ಲೆ |
| 34 | ಡಾಃ ಜಗದೀಶ್ ಕೆ. | ಸಾರ್ವಜನಿಕ ಆಸ್ಪತ್ರೆ, ಚಿಕ್ಕನಾಯಕನಹಳ್ಳಿ, ತುಮಕೂರು |
| 35 | ಡಾಃ ಗಿರೀಶ್ ಜೆ.ಕೆ. | ಸಾರ್ವಜನಿಕ ಆಸ್ಪತ್ರೆ, ಹೊಳೆನರಸೀಪುರ, ಹಾಸನ ಜಿಲ್ಲೆ |
| 36 | ಡಾಃ ಲಕ್ಷ್ಮಣ ವಿ.ಎನ್. | ಸಾರ್ವಜನಿಕ ಆಸ್ಪತ್ರೆ, ಚನ್ನಪಟ್ಟಣ, ಬೆಂಗಳೂರು ಗ್ರಾ. ಜಿಲ್ಲೆ |
| 37 | ಡಾಃ ಸಂಜಯ್ ಸೀತಾರಾಮ ನಾಯ್ಕ್ | ಸಾರ್ವಜನಿಕ ಆಸ್ಪತ್ರೆ, ಹೊನ್ನಾವರ, ಕಾರವಾರ, ಉತ್ತರ ಕನ್ನಡ ಜಿಲ್ಲೆ |
| 38 | ಡಾಃ ಪ್ರವೀಣ್ ಬಿ.ವಿ. | ಸಾರ್ವಜನಿಕ ಆಸ್ಪತ್ರೆ, ತರೀಕೆರೆ, ಚಿಕ್ಕಮಗಳೂರು |
| 39 | ಡಾಃ ವೆಂಕಟೇಶ್ ಎಸ್. | ಜಿಲ್ಲಾ ಆಸ್ಪತ್ರೆ ಚಿಕ್ಕಮಗಳೂರು. |

ಎಸ್.ಕೆ.ತೆಗ್ಗಿನಮನಿ
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರಭಾರ),
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

PR-1058

## ENERGY SECRETARIAT

**Sub :** Enhancement of Mini Hydel Project Capacity from 2 M.W to 24 M.W in favour of M/s.AMR Power Private Limited-Orders relating to.

**Read :** 1. Government order No. EN 294 NCE 2004 dated: 13.9.2004.

2. Letter No. KRED/06/PERLA/2005/1104 dated: 24/25.06.2005 and No. KRED/06/PERLA/2005/1222 dated: 11/12.7.2005 received from MD, KREDL, Bangalore.

**Preamble:**

In the Government Order read at (1) above, sanction has been accorded to M/s. AMR Power Private Limited to implement 2 M.W. capacity Mini Hydel Project at across the river Nethravathi at Perla Village Bhantwala Taluk, Dakshina Kannada District (Longitude $75^0$-06'-46" (Weir) East Latitude $12^0$-52'-24" (Weir) North).

In the letters read at (2) above the Managing Director, Karnataka Renewable Energy Development Limited, Bangalore has recommended for enhancement of the capacity from 2 M.W. to 24 M.W. across the river Nethravathi at Perla Village Bhantwala Taluk, Dakshina Kannada by M/s. AMR Power Private Limited.

Hence, the following order

**Government Order No. EN 183 NCE 2005 Bangalore, dated: 19th July 2005**

In the Circumstances, explained in the preamble and after careful consideration, Government are pleased to accord approval for the enhancement of Mini Hydel Project from 2 M.W. to 24 M.W. in favour of M/s. AMR Power Private Limited at across the river Nethravathi at Perla Village Bhantwala Taluk, Dakshina Kannada District (Longitude $75^0$-19'-30" (Weir) East Latitude $12^0$-51'-15" (Weir) North) by M/s.AMR Power Private Limited subject to the condition that the developer should obtain clearances from Irregation Department and Karnataka Urban Water Supplies and Drinage Board and construction of a flood protection wall.

The terms and conditions of the Government Order read at (1) above, shall IPSO FACTO applicable.

By Order and in the Name of the Governor of Karnataka,
**Suresh B. Krishnappanavar**
Under Secretary to Government,
Energy Department.

PR-1061

**ಕಂದಾಯ ಸಚಿವಾಲಯ**

**ವಿಷಯ :** ಟಾಗೋರ್ ಸ್ಮಾರಕ ಶಿಕ್ಷಣ ಸಂಸ್ಥೆ, ರಾಯಚೂರು, ರಾಯಚೂರು ಜಿಲ್ಲೆ, ಈ ಸಂಸ್ಥೆಗೆ ನೇಮಕ ಮಾಡಲಾಗಿರುವ ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸಿ ಆದೇಶಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಕಂಇ 10 ಮುನೊಸೊ 2001, (ಪಿ), ದಿನಾಂಕ: 13.02.2002.
2. ಸರ್ಕಾರಿ ಆದೇಶ ಸಂಖ್ಯೆ: ಕಂಇ 04 ಮುನೊಸೊ 04, ದಿನಾಂಕ: 31.08.04.
3. ಸಹಾಯಕ ಆಯುಕ್ತರು ರಾಯಚೂರು ಹಾಗೂ ಆಡಳಿತಾಧಿಕಾರಿಗಳು, ಟಾಗೋರ್ ಸ್ಮಾರಕ ಶಿಕ್ಷಣ ಸಂಸ್ಥೆ, ರಾಯಚೂರು ಇವರ ಪತ್ರ ಸಂಖ್ಯೆ: ಕಂ: ಆಡಳಿತ:87:01-02, ದಿನಾಂಕ: 10.06.2005.

**ಪ್ರಸ್ತಾವನೆ:**

ಮೇಲೆ ಓದಲಾದ-1ರ ಸರ್ಕಾರಿ ಆದೇಶದಲ್ಲಿ ಟಾಗೋರ್ ಸ್ಮಾರಕ ಶಿಕ್ಷಣ ಸಂಸ್ಥೆಗೆ ಆಡಳಿತಾಧಿಕಾರಿಯನ್ನು ನೇಮಕ ಮಾಡಲಾಗಿದ್ದು, ನಂತರ ಕಾಲಕಾಲಕ್ಕೆ ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸಿಕೊಂಡು ಬರಲಾಗಿದ್ದು ಮೇಲೆ-2ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ವಿಸ್ತರಿಸಿ ಆದೇಶಿಸಲಾಗಿದ್ದ ಆಡಳಿತಾಧಿಕಾರಿ ಅವಧಿಯು ದಿನಾಂಕ: 12.02.2005ಕ್ಕೆ ಮುಕ್ತಾಯಗೊಂಡಿರುತ್ತದೆ. ಮೇಲೆ ಓದಲಾದ-3ರಲ್ಲಿ ಆಡಳಿತಾಧಿಕಾರಿಗಳು ವರದಿ ನೀಡಿ ಸಂಸ್ಥೆಗೆ ಸಂಬಂಧಿಸಿದ ಮೂಲ ದಾವೆ ಸಂಖ್ಯೆ:1/2001ರ ಪ್ರಕರಣವು ಸಾಕ್ಷಿಗಾಗಿ ಬಾಕಿ ಇರುವುದರಿಂದ, ಆಡಳಿತಾಧಿಕಾರಿ ಅವಧಿಯನ್ನು ಇನ್ನು 6 ತಿಂಗಳವರೆಗೆ ವಿಸ್ತರಿಸಿ ಆದೇಶಿಸುವಂತೆ ಕೋರಿರುತ್ತಾರೆ.

ಆಡಳಿತಾಧಿಕಾರಿಯವರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಆಡಳಿತಾಧಿಕಾರಿಯವರ ಅವಧಿಯನ್ನು ಮತ್ತೆ 6 ತಿಂಗಳವರೆಗೆ ವಿಸ್ತರಿಸಲು ಸರ್ಕಾರವು ನಿರ್ಧರಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 4 ಮುನೊಸೊ 2004, ಬೆಂಗಳೂರು, ದಿನಾಂಕ: 14ನೇ ಜುಲೈ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ-27-ಎ ಪ್ರಕಾರ ಟಾಗೋರ್ ಸ್ಮಾರಕ ಶಿಕ್ಷಣ ಸಂಸ್ಥೆಗೆ ನೇಮಕ ಮಾಡಲಾಗಿದ್ದ ಆಡಳಿತಾಧಿಕಾರಿ ಅವಧಿಯನ್ನು ಸಂಸ್ಥೆಯ ಹಾಗೂ ಸಾರ್ವಜನಿಕ ಹಿತದೃಷ್ಟಿಯಿಂದ ದಿನಾಂಕ: 13.02.2005 ರಿಂದ 6 ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಅಥವಾ ಇವೆರಡರಲ್ಲಿ ಯಾವುದು ಮೊದಲೋ, ಅಲ್ಲಿಯವರೆಗೆ ವಿಸ್ತರಿಸಿ ಆದೇಶಿಸಿದೆ.

ಈ ಅವಧಿಯಲ್ಲಿ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ಪಿ. ಮಂಜುನಾಥ್**
ಪೀಠಾಧಿಕಾರಿ, ಕಂದಾಯ ಇಲಾಖೆ,
(ನೋಂದಣಿ ಮತ್ತು ಮುದ್ರಾಂಕ).

ಪಿ.ಆರ್.1060

**INFRASTRUCTURE DEVELOPMENT SECRETARIAT**

**Sub :** Release of funds for Sholapur Gadag Gauge Conversion Project-regarding.

**Read :**
1. Government No. IDD 1 NSW 2003, dated: 3.3.2003.
2. Government No. IDD 1 NSW 2003, dated: 29.03.03.
3. Government No. IDD 40 NSW 2003, dated: 16.9.2003.
4. Government No. IDD 95 NSW 2003, dated: 22.1.2004.
5. Government No. IDD 42 NSW 2004, dated: 16.6.2004.
6. Note No. IDD 114 IDM 2004, dated: 30.12.2004.
7. Government No. FD 45 BRS 2005, dated: 28.1.2005.
8. Government No. IDD 21 NSW 2005, dated: 22.2.2005
9. Government No. FD 271 (B) BRS 2005, dated: 26.3.2005
10. Government No. IDD 21 NSW 2005, dated: 22.2.2005
11. Government No. IDD 21 NSW 2005, dated: 29.3.2005
12. Letter from the Chief Administrative Officer (Construction) South Western Railway, Bangalore dated: 07.07.2004.

**Preamble:**

In Government Orders read at Sl.No.1 to 11 above, Government of Karnataka have released Rs.46 crores (Rupees forty six crores only) so far towards its 50% share of the cost for construction of Sholapur-Gadag Gauge Conversion Project. The Chief Administrative Officer, (Construction), South Western Railway, Bangalore, in his letter read at Sl.No.12 above, has requested further release of funds towards this project Hence this order.

**Government Order No. IDD 42 NSW 2004 (P), Bangalore dated: 22nd July 2005**

1. After carefully examining the request of Chief Administrative Officer, (Construction), South Western Railway, and in continuation of the G.O. No. IDD 21 NSW 2005, dated: 29.3.2005, and in the circumstances stated in the preamble of the said G.O. Government are please to release Rs.6.70 crores (Rupees Six Crores Seventy Lakhs only) towards the State Government's Share of the cost of 50 percent for Sholapur-Gadag Gauge Conversion Project.
2. This expenditure shall be met out of the Head of Account "5465-01-190-3-03-211 Sholapur Gadag Gauge Conversion Project-Investments (Plan)".
3. The Chief Finance Officer of IDeCK is authorized to draw the amount through a payee's receipt duly countersigned by the Under Secretary to Government, Infrastructure Development Department, and iDeCK shall in turn deposit the same with the Financial Adviser and Chief Accounts Officer, (Construction), South Western Railway, Bangalore.
4. The Chief Engineer, (Construction), South Western Railway, shall, arrange to furnish monthly expenditure statement to the Infrastructure Development Department by the 5th of the Succeeding month.
5. This order issues with the concurrence of Finance Department vide its U.O. Note No. FD 1361/Exp.1/05, dated: 20.07.2005.

By Order and in the Name of the Governor of Karnataka,

**T. B. RENUKAPRASAD**

PR-1050

Under Secretary to Government,

Infrastructure Development Department.

## ಲೋಕೋಪಯೋಗಿ ಸಚಿವಾಲಯ

**ವಿಷಯ :** ರಾಜ್ಯದಲ್ಲಿನ ಕೆಲವು ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವ ಕುರಿತು.

**ಓದಲಾಗಿದೆ :**

1. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ : ಸಂಕದ : ರಶಾ: ಮೇಲ್ದರ್ಜೆ: ಬೆಂ:ಸಇಂ5:34: 2005–06, ದಿನಾಂಕ:20–5–2005.
2. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ: ರಸ್ತೆ:ಶಾಖೆ:ಎಇ:–4:ಬಂಟ್ವಾಳ ತಾಲ್ಲೂಕು: ಅಜುಕಳ–ಕೆಂಪುಗಡ್ಡೆ–ಕಲ್ಮನೆ 2005–06, ದಿನಾಂಕ: 31–5–2005.
3. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ:ಸಂಕದ:ರಸ್ತೆಮೇಲ್ದರ್ಜೆ:ತುವಿ:ಸಿ–2:2005–06, ದಿನಾಂಕ:24–06–2005
4. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ:ಸಂಕದ:ರಸ್ತೆಶಾಖೆ:ಎಇ7: ಹಾಸನ: ಹೊ.ನ.ಪುರ: 05–06, ದಿನಾಂಕ:25–06–2005
5. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ:ಸಂಕದ:ರಶಾ:ರಾಮನಗರ:ಮೇಲ್ದರ್ಜೆ:ಸಇಂ5:34:2005–06, ದಿನಾಂಕ:15–07–2005.
6. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ: ಸಂಕದ:ರಶಾ:ಮೇಲ್ದರ್ಜೆ:ಸಇ2:2005–06, ದಿನಾಂಕ:16–07–2005.
7. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ:ಸಂಕದ: ರಸ್ತೆ ಶಾಖೆ:ಇಎ7: ಹಾಸನ: ಹೊನಪುರ: 05–06, ದಿನಾಂಕ:18–07–05.
8. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ: ಸಂಕದ: ರಸ್ತೆಶಾಖೆ:ಸಇಂ4: ಕೆಆರ್‌ನಗರ: 2005–06, ದಿನಾಂಕ:20–07–2005.

**ಪ್ರಸ್ತಾವನೆ:–**

ಮೇಲೆ ಓದಲಾದ ಪತ್ರಗಳಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಸಲ್ಲಿಸಿರುವ ಈ ಕೆಳಕಂಡ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

| ಕ್ರ. ಸಂ. | ರಸ್ತೆಯ ವಿವರ | ಉದ್ದ ಕಿಮೀ |
|---|---|---|
| 1 | **ಹಾಸನ ಜಿಲ್ಲೆ**<br>**ಹೊಳೆನರಸೀಪುರ ತಾಲ್ಲೂಕು**<br>1. ದೊಡ್ಡಕುಂಚೇವು-ಒಂಟಿಗುಡ್ಡ ಅತ್ತಿಚೌಡನಹಳ್ಳಿ ರಸ್ತೆ.<br>2. ಸಿ.ಎನ್.ಎಸ್. ರಸ್ತೆಯಿಂದ ತಟ್ಟೆಕೆರೆ ರಸ್ತೆ.<br>3. ಸಿ.ಎನ್.ಎಸ್. ರಸ್ತೆಯ 40ನೇ ಕಿಮೀ ನಿಂದ ಗೊಂದಿಹಳ್ಳಿ ಸೇತುವೆಗೆ ಹೋಗುವ ರಸ್ತೆ. | <br><br>3.00<br>1.60<br>2.00 |
| 2 | **ಹಾಸನ ತಾಲ್ಲೂಕು:**<br>1. ಗೊರೂರು-ಚಿನಕುರಳಿ ರಸ್ತೆಯಿಂದ ಮಾರೇನಹಳ್ಳಿ ಮುತ್ತಿಗೆ ಚಂಡಿಕಾಂಭಾ ದೇವಾಲಯ ಮುತ್ತಿಗೆ ಹೀರೇಹಳ್ಳಿ ಸೇರುವ ರಸ್ತೆ.<br>2. ಬಿ.ಎಂ.ರಸ್ತೆ 180.70 ಯಿಂದ ಭೂವನಹಳ್ಳಿ ಮಾರ್ಗವಾಗಿ ಉದ್ದೇಶಿತ ವಿಮಾನ ನಿಲ್ದಾಣಕ್ಕೆ ಹೋಗುವ ರಸ್ತೆ.<br>3. ಕಬ್ಬತ್ತಿ ಚನ್ನಂಗಿ ಹಳ್ಳಿ ರಸ್ತೆ 7.00 ನೇ ಕಿಮೀ ರಿಂದ ಬೀಕನಹಳ್ಳಿ ಸಕಲೇನಹಳ್ಳಿ ರಸ್ತೆ.<br>4. ಗೊರೂರು-ಚಿನಕುರಳ್ಳಿ ರಸ್ತೆ ಕಿ.ಮೀ.2.6 ರಿಂದ ಮಲ್ಲೇದೇವಪುರ ರಸ್ತೆ.<br>5. ಬಿಳಿಕೆರೆ-ತರೀಕೆರೆ ರಸ್ತೆ 76.1 ರಿಂದ ಕುರುಬರಹಳ್ಳಿಗೆ ಹೋಗುವ ರಸ್ತೆ. | <br>4.00<br><br>3.00<br><br>3.00<br>1.00<br>2.00 |
| 3 | **ಅರಕಲಗೂಡು ತಾಲ್ಲೂಕು:**<br>1. ಗೊರೂರು ಹೊಳೆನರಸೀಪುರ ರಸ್ತೆಯಿಂದ ಬಸವನಹಳ್ಳಿ ಮಾರ್ಗ, H.M.K.G ರಸ್ತೆಗೆ ಸೇರುವ ರಸ್ತೆ.<br>2.ಗೊರೂರು-ಹೊಳೆನರಸೀಪುರ ರಸ್ತೆಯಿಂದ ಗಂಗನಾಳು ಗ್ರಾಮ-ಅಣ್ಣಿಗನಹಳ್ಳಿ-ವೆಂಕಟರಮಣಸ್ವಾಮಿ ದೇವಸ್ಥಾನ-ಹರದೂರು ಮಾರ್ಗವಾಗಿ ಹೊಳೆನರಸೀಪುರ ಮಾಕವಳ್ಳಿ ಕಳ್ಳಿಕೊಪ್ಪಲು ರಸ್ತೆಯನ್ನು ಸೇರುವ ರಸ್ತೆ. | <br>2.50<br><br>7.00 |
| 4 | **ಸಕಲೇಶಪುರ ತಾಲ್ಲೂಕು:**<br>1. ಕಳಲೆ ಈಚಲಬೀಡು ರಸ್ತೆ.<br>2. ಹಾನಬಾಳು ದೇವರುಂದ ರಸ್ತೆಯಿಂದ ಅಚ್ಚನಹಳ್ಳಿ ಬಿಳಾಸಾರೆ ರಸ್ತೆ.<br>3. ಕಟ್ಟಾಯ ಹಳ್ಳಿಬೈಲು ರಸ್ತೆಯಿಂದ ಗಂಜಿಗೆರೆ ಸಿದ್ದಾಪುರ ರಸ್ತೆ. | <br>3.00<br>3.00<br>4.00 |
| 5 | **ಶಿವಮೊಗ್ಗ ಜಿಲ್ಲೆ:**<br>**ತೀರ್ಥಹಳ್ಳಿ ತಾಲ್ಲೂಕು:**<br>1. ತೀಥಹಳ್ಳಿ ತಾಲ್ಲೂಕಿನ ಕುಂದಾದ್ರಿ ಜೈನ ದೇವಸ್ಥಾನದಿಂದ ಹೊಸಗದ್ದೆ ಗುಡ್ಡೇಕೇರಿಯನ್ನು ಸಂಪರ್ಕಿಸುವ ರಸ್ತೆ. | <br><br>15.00 |
| 6 | **ಮೈಸೂರು ಜಿಲ್ಲೆ:**<br>**ಕೆ.ಆರ್.ನಗರ ತಾಲ್ಲೂಕು:**<br>1. ಬೆಂಗಳೂರು ಜಲ್ಲೂರು ರಸ್ತೆಯಿಂದ ಹೊನ್ನೇನಹಳ್ಳಿ-ಲಕ್ಕಿಕುಪ್ಪೆ ಕೊಪ್ಪಲು ಗಾಯನಹಳ್ಳಿ ಮುಖಾಂತರ ಬೆಂಗಳೂರು ಜಲ್ಲೂರು ರಸ್ತೆ.<br>2. ಹಳ್ಳಿ ಮೈಸೂರು-ಸಾಲಿಗ್ರಾಮ ಚುಂಚನಕಟ್ಟೆ ರಸ್ತೆಯಿಂದ ಜ್ಯೋತಿರ್ಮಹೇಶ್ವರ ದೇವಸ್ಥಾನ ರಸ್ತೆ<br>3. ಹಳ್ಳಿ ಮೈಸೂರು-ಸಾಲಿಗ್ರಾಮ ಚುಂಚನಕಟ್ಟೆ ರಸ್ತೆಯಿಂದ ತಂದ್ರೆ ಕೊಪ್ಪಲು-ತಂದ್ರೆ-ಅಂಕನಹಳ್ಳಿ-ಮಾಕನಹಳ್ಳಿ-ಕುಪ್ಪಳ್ಳಿ-ಮುದುಗುಪ್ಪೆ-ಮಂಜನಹಳ್ಳಿ ರಸ್ತೆ.<br>4. ಹಳ್ಳಿ ಮೈಸೂರು-ಸಾಲಿಗ್ರಾಮ-ಚುಂಚನಕಟ್ಟೆ ರಸ್ತೆಯಿಂದ ರಾಂಪುರ-ಮಾದಾಪುರ-ದಡದಳ್ಳಿ ರಸ್ತೆ ಮುಖಾಂತರ ಬೆಂಗಳೂರು ಜಲ್ಲೂರು ರಸ್ತೆ.<br>5. ಹಳ್ಳಿ ಮೈಸೂರು-ಸಾಲಿಗ್ರಾಮ-ಚುಂಚನಕಟ್ಟೆ ರಸ್ತೆಯಿಂದ ಸಾಲಿಗ್ರಾಮ ಮುಖಾಂತರ ಬಳ್ಳೂರು ರಸ್ತೆ.<br>6. ಹಳ್ಳಿ ಮೈಸೂರು-ಸಾಲಿಗ್ರಾಮ-ಚುಂಚನಕಟ್ಟೆ ರಸ್ತೆಯಿಂದ ಮುಂಡೂರು ಮುಖಾಂತರ ಬೆಟ್ಟಹಳ್ಳಿ ರಸ್ತೆ.<br>7. ನರ್ಚನಹಳ್ಳಿಯಿಂದ ಹನುಮನಹಳ್ಳಿ ಕೋಡಿಯಾಲ ಮುಖಾಂತರ ಬೆಂಗಳೂರು ಜಲ್ಲೂರು ರಸ್ತೆ. | <br><br>5.00<br><br>1.50<br>6.00<br><br>4.00<br><br>4.20<br><br>6.00<br><br>5.00 |
| 7 | **ತುಮಕೂರು ಜಿಲ್ಲೆ**<br>**ಕುಣಿಗಲ್ ತಾಲ್ಲೂಕು:**<br>1. ಕೊರಟಗೆರೆ-ವಾವಲಿ ರಸ್ತೆಯಿಂದ ಬೀಚನಹಳ್ಳಿಯ ಮುಖಾಂತರ ಹುಲಿಯೂರು ದುರ್ಗ ಹಳೇಊರು ಸಂಪರ್ಕಿಸುವ ರಸ್ತೆ.<br>2. ರಾಷ್ಟ್ರೀಯ ಹೆದ್ದಾರಿ 48 ರಿಂದ ಮಂಡ್ಯ, ಇಂದಿರಾನಗರ, ಚಿನ್ನಹಳ್ಳಿ,ಪಡುವಗೆರೆ ಚಂದನಹಳ್ಳಿ ಮತ್ತು ಕೀಲಾರದ ಮುಖಾಂತರ ಕೆ ಹೊನ್ನಮಾಚನಹಳ್ಳಿಗೆ ಸೇರುವ ರಸ್ತೆ.<br>3. ರಾಜ್ಯ ಹೆದ್ದಾರಿ 33 ರಿಂದ ಮಾದಪ್ಪನಹಳ್ಳಿ, ಚೌಡನಕುಪ್ಪೆ ಮತ್ತು ತಾವರೇಕೆರೆ ಮುಖಾಂತರ ಚನ್ನಪಟ್ಟಣ ತಾಲ್ಲೂಕು ಗಡಿವರೆಗಿನ ರಸ್ತೆ.<br>4. ರಾಷ್ಟ್ರೀಯ ಹೆದ್ದಾರಿ-48ರ ಆಲಪ್ಪನಗುಡ್ಡೆಯಿಂದ ಎಡಿಗೆರೆಗೆ ಕನಗುಣಿ-ಅಡೋನಹಳ್ಳಿ-ಮಡಕೆ ಕನ್ನಸಂದ್ರ ರಸ್ತೆ. | <br><br>3.00<br><br>35.00<br><br>17.00<br><br>12.00 |

| ಕ್ರ. ಸಂ. | ರಸ್ತೆಯ ವಿವರ | ಉದ್ದ ಕಿಮೀ |
|---|---|---|
| 8 | **ಬೆಂಗಳೂರು ಗ್ರಾಮಾಂತರ ಜಿಲ್ಲೆ:** | |
| | **ರಾಮನಗರ ತಾಲ್ಲೂಕು:** | |
| | 1. ಬಿ.ಎಂ.ರಸ್ತೆಯಿಂದ ಕೆಂಪನಹಳ್ಳಿ ಹೆಗ್ಗಡಗೆರೆ, ಇಟ್ಟಮಡು, ಬೈರಮಂಗಲ, ಹೊಸೂರು ಮಾರ್ಗ ಕನಕಪುರ ಎಲ್ಕೆ ಸೇರುವ ರಸ್ತೆ. | 12.00 |
| | 2. ಕನಕಪುರ ರಸ್ತೆಯಿಂದ ಚನ್ನಪಟ್ಟಣ ಸೇರುವ ರಸ್ತೆ ಮಾರ್ಗ ಚನ್ನಮಾನಹಳ್ಳಿ, ವಿಭೂತಿಕೆರೆ, ಬನ್ನಿಕೊಪ್ಪ ರಸ್ತೆ. | 12.50 |
| | 3. ಕಾಕರಾಮನಹಳ್ಳಿ ಹಿರೇಹಳ್ಳಿ ಅವರಗೆರೆ ವಾಜರಹಳ್ಳಿ ಕೇತಗಾನಹಳ್ಳಿ ಬೈರಾಗಿ ಕಾಲೋನಿ ಮುಖಾಂತರ ಬಿ.ಎಂ. ರಸ್ತೆ ಸೇರುವ ರಸ್ತೆ. | 9.00 |
| | 4. ಬಿ.ಎಂ. ರಸ್ತೆ ಹೆಜ್ಜಾಲದಿಂದ ದೊಡ್ಡೇರಿ ಮಾರ್ಗ ಕೆಂಪಾದಾಪನಹಳ್ಳಿ ಸೇರುವ ರಸ್ತೆ. | 8.00 |
| | 5. ಹಳೇ ಬಿ.ಎಂ.ರಸ್ತೆಯಿಂದ ಖಜಾ ಮಕನ್ ರಸ್ತೆ-ಬಾಲಗೆರೆಯಿಂದ A.P.M.C ಯಾರ್ಡ್‌ಗೆ ಸೇರುವ ರಸ್ತೆ | 3.00 |
| | **ಬೆಂಗಳೂರು ದಕ್ಷಿಣ ತಾಲ್ಲೂಕು:** | |
| | 1. ರಾವುಗೊಂಡನಹಳ್ಳಿ ಗುಂಡಾ ಆಂಜನೇಯ ಸ್ವಾಮಿ ದೇವಸ್ಥಾನ ನೆಟ್ಟಿಗೆರೆ ರಸ್ತೆ. | 9.00 |
| 9 | **ದಕ್ಷಿಣ ಕನ್ನಡ ಜಿಲ್ಲೆ:** | |
| | **ಬಂಟ್ವಾಳ ತಾಲ್ಲೂಕು:** | |
| | 1. ಅಮ್ಟಾಡಿ ಗ್ರಾಮದಲ್ಲಿನ ಅಜಕಳ-ಕೆಂಪುಗುಡ್ಡೆ-ಕಲ್ಮನೆ ರಸ್ತೆ ಮತ್ತು ನೂಜಿ ಅಶ್ವಥ ಕಟ್ಟೆ ರಸ್ತೆ. | 7.00 |
| 10 | **ಕೋಲಾರ ಜಿಲ್ಲೆ:** | |
| | **ಶಿಡ್ಲಘಟ್ಟ ತಾಲ್ಲೂಕು:** | |
| | ಅಚ್ಚಕದರೇನ ಹಳ್ಳಿಯಿಂದ ಬಶೆಟ್ಟಿಹಳ್ಳಿ ವಯಾ ಆನೇಮಡುಗು ರಸ್ತೆ. | 12.00 |

**ಸರ್ಕಾರಿ ಆದೇಶ ಸಂಖ್ಯೆ: ಲೋಇ 93 ಸಿಆರ್‌ಎಂ 2005, ಬೆಂಗಳೂರು, ದಿನಾಂಕ: 20ನೇ ಜುಲೈ 2005**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಸಲ್ಲಿಸಿರುವ ಪ್ರಸ್ತಾವನೆಗಳನ್ನು ಪರಿಶೀಲಿಸಲಾಗಿ ಈ ಕೆಳಕಂಡ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

| ಕ್ರ. ಸಂ. | ರಸ್ತೆಯ ವಿವರ | ಉದ್ದ ಕಿಮೀ |
|---|---|---|
| 1 | **ಹಾಸನ ಜಿಲ್ಲೆ** | |
| | **ಹೊಳೆನರಸೀಪುರ ತಾಲ್ಲೂಕು** | |
| | 1. ದೊಡ್ಡಕುಂಚೇವು-ಒಂಟಿಗುಡ್ಡ ಅತ್ತಿಚೌಡನಹಳ್ಳಿ ರಸ್ತೆ. | 3.00 |
| | 2. ಸಿ.ಎನ್.ಎಸ್. ರಸ್ತೆಯಿಂದ ತಟ್ಟೆಕೆರೆ ರಸ್ತೆ. | 1.60 |
| | 3. ಸಿ.ಎನ್.ಎಸ್. ರಸ್ತೆಯ 40ನೇ ಕಿಮೀ ನಿಂದ ಗೊಂದಿಹಳ್ಳಿ ಸೇತುವೆಗೆ ಹೋಗುವ ರಸ್ತೆ. | 2.00 |
| 2 | **ಹಾಸನ ತಾಲ್ಲೂಕು:** | |
| | 1. ಗೊರೂರು-ಚಿನಕುರಳಿ ರಸ್ತೆಯಿಂದ ಮಾರೇನಹಳ್ಳಿ ಮುತ್ತಿಗೆ ಚಂಡಿಕಾಂಭಾ ದೇವಾಲಯ ಮುತ್ತಿಗೆ ಹೀರೇಹಳ್ಳಿ ಸೇರುವ ರಸ್ತೆ. | 4.00 |
| | 2. ಬಿ.ಎಂ.ರಸ್ತೆ 180.70 ಯಿಂದ ಭೂವನಹಳ್ಳಿ ಮಾರ್ಗವಾಗಿ ಉದ್ದೇಶಿತ ವಿಮಾನ ನಿಲ್ದಾಣಕ್ಕೆ ಹೋಗುವ ರಸ್ತೆ. | 3.00 |
| | 3. ಕಬ್ಬತ್ತಿ ಚನ್ನಂಗಿ ಹಳ್ಳಿ ರಸ್ತೆ 7.00 ನೇ ಕಿಮೀ ರಿಂದ ಬೀಕನಹಳ್ಳಿ ಸಕಲೇನಹಳ್ಳಿ ರಸ್ತೆ. | 3.00 |
| | 4. ಗೊರೂರು-ಚಿನಕುರಳ್ಳಿ ರಸ್ತೆ ಕಿ.ಮೀ.2.6 ರಿಂದ ಮಲ್ಲೇದೇವಪುರ ರಸ್ತೆ. | 1.00 |
| | 5. ಬಿಳಿಕೆರೆ-ತರೀಕೆರೆ ರಸ್ತೆ 76.1 ರಿಂದ ಕುರುಬರಹಳ್ಳಿಗೆ ಹೋಗುವ ರಸ್ತೆ. | 2.00 |
| 3 | **ಅರಕಲಗೂಡು ತಾಲ್ಲೂಕು:** | |
| | 1. ಗೊರೂರು ಹೊಳೆನರಸೀಪುರ ರಸ್ತೆಯಿಂದ ಬಸವನಹಳ್ಳಿ ಮಾರ್ಗ, H.M.K.G ರಸ್ತೆಗೆ ಸೇರುವ ರಸ್ತೆ. | 2.50 |
| | 2.ಗೊರೂರು-ಹೊಳೆನರಸೀಪುರ ರಸ್ತೆಯಿಂದ ಗಂಗನಾಳು ಗ್ರಾಮ-ಅಣ್ಣಿಗನಹಳ್ಳಿ-ವೆಂಕಟರಮಣಸ್ವಾಮಿ ದೇವಸ್ಥಾನ-ಹರದೂರು ಮಾರ್ಗವಾಗಿ ಹೊಳೆನರಸೀಪುರ ಮಾಕವಳ್ಳಿ ಕಳ್ಳಿಕೊಪ್ಪಲು ರಸ್ತೆಯನ್ನು ಸೇರುವ ರಸ್ತೆ. | 7.00 |
| 4 | **ಸಕಲೇಶಪುರ ತಾಲ್ಲೂಕು:** | |
| | 1. ಕಳಲೆ ಈಚಲಬೀಡು ರಸ್ತೆ. | 3.00 |
| | 2. ಹಾನಬಾಳು ದೇವರುಂದ ರಸ್ತೆಯಿಂದ ಅಚ್ಚನಹಳ್ಳಿ ಬಿಳಾಸಾರೆ ರಸ್ತೆ. | 3.00 |
| | 3. ಕಟ್ಟಾಯ ಹಳ್ಳಿಬೈಲು ರಸ್ತೆಯಿಂದ ಗಂಜಿಗೆರೆ ಸಿದ್ದಾಪುರ ರಸ್ತೆ. | 4.00 |

| ಕ್ರ. ಸಂ. | ರಸ್ತೆಯ ವಿವರ | ಉದ್ದ ಕಿಮೀ |
|---|---|---|
| 5 | **ಶಿವಮೊಗ್ಗ ಜಿಲ್ಲೆ:** | |
| | **ತೀರ್ಥಹಳ್ಳಿ ತಾಲ್ಲೂಕು:** | |
| | 1. ತೀರ್ಥಹಳ್ಳಿ ತಾಲ್ಲೂಕಿನ ಕುಂದಾದ್ರಿ ಜೈನ ದೇವಸ್ಥಾನದಿಂದ ಹೊಸಗದ್ದೆ ಗುಡ್ಡೇಕೇರಿಯನ್ನು ಸಂಪರ್ಕಿಸುವ ರಸ್ತೆ. | 15.00 |
| 6 | **ಮೈಸೂರು ಜಿಲ್ಲೆ:** | |
| | **ಕೆ.ಆರ್.ನಗರ ತಾಲ್ಲೂಕು:** | |
| | 1. ಬೆಂಗಳೂರು ಜಲ್ಸೂರು ರಸ್ತೆಯಿಂದ ಹೊನ್ನೇನಹಳ್ಳಿ-ಲಕ್ಕಿಕುಪ್ಪೆ ಕೊಪ್ಪಲು ಗಾಯನಹಳ್ಳಿ ಮುಖಾಂತರ ಬೆಂಗಳೂರು ಜಲ್ಸೂರು ರಸ್ತೆ. | 5.00 |
| | 2. ಹಳ್ಳಿ ಮೈಸೂರು-ಸಾಲಿಗ್ರಾಮ ಚುಂಚನಕಟ್ಟೆ ರಸ್ತೆಯಿಂದ ಜ್ಯೋತಿರ್ಮಹೇಶ್ವರ ದೇವಸ್ಥಾನ ರಸ್ತೆ | 1.50 |
| | 3. ಹಳ್ಳಿ ಮೈಸೂರು-ಸಾಲಿಗ್ರಾಮ ಚುಂಚನಕಟ್ಟೆ ರಸ್ತೆಯಿಂದ ತಂದ್ರೆ ಕೊಪ್ಪಲು-ತಂದ್ರೆ-ಅಂಕನಹಳ್ಳಿ-ಮಾಕನಹಳ್ಳಿ-ಕುಪ್ಪಳ್ಳಿ-ಮುದುಗುಪ್ಪೆ-ಮಂಜನಹಳ್ಳಿ ರಸ್ತೆ. | 6.00 |
| | 4. ಹಳ್ಳಿ ಮೈಸೂರು-ಸಾಲಿಗ್ರಾಮ-ಚುಂಚನಕಟ್ಟೆ ರಸ್ತೆಯಿಂದ ರಾಂಪುರ-ಮಾದಾಪುರ-ದಡದಳ್ಳಿ ರಸ್ತೆ ಮುಖಾಂತರ ಬೆಂಗಳೂರು ಜಲ್ಸೂರು ರಸ್ತೆ. | 4.00 |
| | 5. ಹಳ್ಳಿ ಮೈಸೂರು-ಸಾಲಿಗ್ರಾಮ-ಚುಂಚನಕಟ್ಟೆ ರಸ್ತೆಯಿಂದ ಸಾಲಿಗ್ರಾಮ ಮುಖಾಂತರ ಬಳ್ಳೂರು ರಸ್ತೆ. | 4.20 |
| | 6. ಹಳ್ಳಿ ಮೈಸೂರು-ಸಾಲಿಗ್ರಾಮ-ಚುಂಚನಕಟ್ಟೆ ರಸ್ತೆಯಿಂದ ಮುಂಡೂರು ಮುಖಾಂತರ ಬೆಟ್ಟಹಳ್ಳಿ ರಸ್ತೆ. | 6.00 |
| | 7. ನರ್ಚನಹಳ್ಳಿಯಿಂದ ಹನುಮನಹಳ್ಳಿ ಕೋಡಿಯಾಲ ಮುಖಾಂತರ ಬೆಂಗಳೂರು ಜಲ್ಸೂರು ರಸ್ತೆ. | 5.00 |
| 7 | **ತುಮಕೂರು ಜಿಲ್ಲೆ** | |
| | **ಕುಣಿಗಲ್ ತಾಲ್ಲೂಕು:** | |
| | 1. ಕೊರಟಗೆರೆ-ವಾವಲಿ ರಸ್ತೆಯಿಂದ ಬೀಚನಹಳ್ಳಿಯ ಮುಖಾಂತರ ಹುಲಿಯೂರು ದುರ್ಗ ಹಳೇಊರು ಸಂಪರ್ಕಿಸುವ ರಸ್ತೆ. | 3.00 |
| | 2. ರಾಷ್ಟ್ರೀಯ ಹೆದ್ದಾರಿ 48 ರಿಂದ ಮಂಡ್ಯ, ಇಂದಿರಾನಗರ, ಚಿನ್ನಹಳ್ಳಿ,ಪಡುವಗೆರೆ ಚಂದನಹಳ್ಳಿ ಮತ್ತು ಕೀಲಾರದ ಮುಖಾಂತರ ಕೆ ಹೊನ್ನಮಾಚನಹಳ್ಳಿಗೆ ಸೇರುವ ರಸ್ತೆ. | 35.00 |
| | 3. ರಾಜ್ಯ ಹೆದ್ದಾರಿ 33 ರಿಂದ ಮಾದಪ್ಪನಹಳ್ಳಿ, ಚೌಡನಕುಪ್ಪೆ ಮತ್ತು ತಾವರೇಕೆರೆ ಮುಖಾಂತರ ಚನ್ನಪಟ್ಟಣ್ಣ ತಾಲ್ಲೂಕು ಗಡಿವರೆಗಿನ ರಸ್ತೆ. | 17.00 |
| | 4. ರಾಷ್ಟ್ರೀಯ ಹೆದ್ದಾರಿ-48ರ ಆಲಪ್ಪನಗುಡ್ಡೆಯಿಂದ ಎಡಿಗೆರೆಗೆ ಕನಗುಣಿ-ಅಡೋನಹಳ್ಳಿ-ಮಡಕೆ ಕನ್ನಸಂದ್ರ ರಸ್ತೆ. | 12.00 |
| 8 | **ಬೆಂಗಳೂರು ಗ್ರಾಮಾಂತರ ಜಿಲ್ಲೆ:** | |
| | **ರಾಮನಗರ ತಾಲ್ಲೂಕು:** | |
| | 1. ಬಿ.ಎಂ.ರಸ್ತೆಯಿಂದ ಕೆಂಪನಹಳ್ಳಿ ಹೆಗ್ಗಡಗೆರೆ, ಇಟ್ಟಮಡು,ಬೈರಮಂಗಲ, ಹೊಸೂರು ಮಾರ್ಗ ಕನಕಪುರ ಎಲ್ಲೆ ಸೇರುವ ರಸ್ತೆ. | 12.00 |
| | 2. ಕನಕಪುರ ರಸ್ತೆಯಿಂದ ಚನ್ನಪಟ್ಟಣ ಸೇರುವ ರಸ್ತೆ ಮಾರ್ಗ ಚನ್ನಮಾನಹಳ್ಳಿ, ವಿಭೂತಿಕೆರೆ, ಬನ್ನಿಕೊಪ್ಪ ರಸ್ತೆ. | 12.50 |
| | 3. ಕಾಕರಾಮನಹಳ್ಳಿ ಹಿರೇಹಳ್ಳಿ ಅವರಗೆರೆ ವಾಜರಹಳ್ಳಿ ಕೇತಗಾನಹಳ್ಳಿ ಬೈರಾಗಿ ಕಾಲೋನಿ ಮುಖಾಂತರ ಬಿ.ಎಂ. ರಸ್ತೆ ಸೇರುವ ರಸ್ತೆ. | 9.00 |
| | 4. ಬಿ.ಎಂ. ರಸ್ತೆ ಹೆಜ್ಜಾಲದಿಂದ ದೊಡ್ಡೇರಿ ಮಾರ್ಗ ಕೆಂಪಾದಾಪನಹಳ್ಳಿ ಸೇರುವ ರಸ್ತೆ. | 8.00 |
| | 5. ಹಳೇ ಬಿ.ಎಂ.ರಸ್ತೆಯಿಂದ ಖಜಾ ಮಕನ್ ರಸ್ತೆ-ಬಾಲಗೆರೆಯಿಂದ A.P.M.C ಯಾರ್ಡ್‌ಗೆ ಸೇರುವ ರಸ್ತೆ | 3.00 |
| | **ಬೆಂಗಳೂರು ದಕ್ಷಿಣ ತಾಲ್ಲೂಕು:** | |
| | 1. ರಾವುಗೊಂಡನಹಳ್ಳಿ ಗುಂಡಾ ಆಂಜನೇಯ ಸ್ವಾಮಿ ದೇವಸ್ಥಾನ ನೆಟ್ಟಿಗೆರೆ ರಸ್ತೆ. | 9.00 |
| 9 | **ದಕ್ಷಿಣ ಕನ್ನಡ ಜಿಲ್ಲೆ:** | |
| | **ಬಂಟ್ವಾಳ ತಾಲ್ಲೂಕು:** | |
| | 1. ಅಮ್ಟಾಡಿ ಗ್ರಾಮದಲ್ಲಿನ ಅಜಕಳ-ಕೆಂಪುಗುಡ್ಡೆ-ಕಲ್ಮನೆ ರಸ್ತೆ ಮತ್ತು ನೂಜಿ ಅಶ್ವಥ ಕಟ್ಟೆ ರಸ್ತೆ. | 7.00 |
| 10 | **ಕೋಲಾರ ಜಿಲ್ಲೆ:** | |
| | **ಶಿಡ್ಲಘಟ್ಟ ತಾಲ್ಲೂಕು:** | |
| | ಅಚ್ಚಕದರೇನ ಹಳ್ಳಿಯಿಂದ ಬಶೆಟ್ಟಿಹಳ್ಳಿ ವಯಾ ಆನೇಮಡುಗು ರಸ್ತೆ. | 12.00 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶೇಖ್ ಅಬ್ದುಲ್ ವಾಜಿದ್**

ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ (ಸಂಪರ್ಕ).

ಪಿ.ಆರ್.1051

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಗ್ರಾಮೀಣ ಕೃಪಾಂಕ ರಹಿತ ಪರಿಷ್ಕೃತ ಪಟ್ಟಿಯಲ್ಲಿ ಆಯ್ಕೆಯಾಗದೇ ಸೇವೆಯಿಂದ ವಿಮೋಚನೆಗೊಂಡಿದ್ದ ಸಹಾಯಕ ಎಂಟಮಾಲಜಿಸ್ಟ್‌ರನ್ನು ಪುನರ್ ನೇಮಕಾತಿ ಮಾಡಿಕೊಳ್ಳುವ ಬಗ್ಗೆ

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಆಕುಕ 294 ಸಿಜಿಇ 2000 ದಿ: 20-06-2001
2. ಸರ್ಕಾರಿ ಸುತ್ತೋಲೆ ಸಂಖ್ಯೆ:ಸಿಆಸುಇ 45 ಸೇನಾನಿ 2003 ದಿ: 02-07-2003
3. ಸರ್ಕಾರಿ ಅಧಿಸೂಚನೆ ಸಂಖ್ಯೆ:ಸಿಆಸುಇ 58 ಎಸ್‌ಆರ್‌ಆರ್ 2003 ದಿ: 12-11-2003
4. ಸರ್ಕಾರದ ಆದೇಶ ಸಂಖ್ಯೆ:ಆಕುಕ 939 ಹೆಚ್‌ಎಸ್‌ಹೆಚ್2003-1 ದಿ: 18-12-2003
5. ಕೆ.ಎ.ಟಿ.ಅರ್ಜಿ ಸಂಖ್ಯೆ:975-979/2005ರ ಮೇಲಿನ ದಿನಾಂಕ: 08-06-05ರ ಆದೇಶ
6. ಸಿಆಸು ಇಲಾಖೆಯ ಸುತ್ತೋಲೆ ಸಂಖ್ಯೆ:ಸಿಆಸುಇ 17 ಸೇನಾನಿ2003 ದಿ: 27-06-2005
7. ಆಯುಕ್ತರು ಆಕುಕ ಸೇವೆಗಳು, ಪತ್ರ ಸಂಖ್ಯೆ: ಡಿಆರ್‌ಸಿ/3/2005-06 ದಿ:01-07-2005

**ಪ್ರಸ್ತಾವನೆ:**

ರಾಜ್ಯ ಸಿವಿಲ್ ಸೇವೆಗಳಲ್ಲಿನ ಹುದ್ದೆಗಳ ನೇರ ನೇಮಕಾತಿಯಲ್ಲಿ ಗ್ರಾಮೀಣ ಅಭ್ಯರ್ಥಿಗಳಿಗೆ ಶೇಕಡಾ ೧೦ರಷ್ಟು ಕೃಪಾಂಕ ನೀಡಲು ಕರ್ನಾಟಕ ಸಿವಿಲ್ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು ೧೯೭೭ರ ನಿಯಮ ೩(ಬಿ)ರಲ್ಲಿ ಅವಕಾಶ ಕಲ್ಪಿಸಲಾಗಿತ್ತು. ಈ ನಿಯಮದಡಿಯಲ್ಲಿ ಮೇಲೆ ಓದಲಾದ ಕ್ರಮ ಸಂಖ್ಯೆ: (೧)ರಲ್ಲಿ ಸರ್ಕಾರದ ಆದೇಶದಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯಲ್ಲಿ ಇತರರೊಂದಿಗೆ ೨೧ ಸಹಾಯಕ ಎಂಟಮಾಲಜಿಸ್ಟ್‌ಗಳಲ್ಲಿ ೧೬ ಗ್ರಾಮೀಣ ಕೃಪಾಂಕದ ಅಭ್ಯರ್ಥಿಗಳನ್ನು ಹುದ್ದೆಯಲ್ಲಿ ನೇಮಕಾತಿ ಮಾಡಲಾಗಿತ್ತು. ಸದರಿ ನಿಯಮ ೩(ಬಿ)ಯನ್ನು ಕರ್ನಾಟಕ ಉಚ್ಚ ನ್ಯಾಯಾಲಯ ಮತ್ತು ಭಾರತ ಸರ್ವೋಚ್ಛ ನ್ಯಾಯಾಲಯದಲ್ಲಿ ಪ್ರಶ್ನಿಸಿದ್ದು ಈ ನ್ಯಾಯಾಲಯಗಳು ನೀಡಿರುವ ತೀರ್ಪುಗಳ ಹಿನ್ನಲೆಯಲ್ಲಿ ಸರ್ಕಾರವು ಮೇಲೆ ಓದಲಾದ ಕ್ರಮಸಂಖ್ಯೆ (೨)ರಲ್ಲಿನ ಸುತ್ತೋಲೆಯಲ್ಲಿ ಗ್ರಾಮೀಣ ಕೃಪಾಂಕದ ಸೌಲಭ್ಯದ ನೇಮಕಾತಿಗೆ ಸಂಬಂಧಿಸಿದಂತೆ ಪರಿಷ್ಕೃತ ಪಟ್ಟಿಯನ್ನು ತಯಾರಿಸುವಂತೆ ಸೂಚನೆಗಳನ್ನು ನೀಡಿದ್ದುದ್ದರ ಹಿನ್ನಲೆಯಲ್ಲಿ ಅದರಂತೆ, ಗ್ರಾಮೀಣ ಕೃಪಾಂಕರಹಿತ ಪರಿಷ್ಕೃತ ಪಟ್ಟಿಯನ್ನು ತಯಾರಿಸಲಾಯಿತು. ಈ ಹಿನ್ನಲೆಯಲ್ಲಿ ಸದರಿ ಪರಿಷ್ಕೃತ ಆಯ್ಕೆ ಪಟ್ಟಿಯಲ್ಲಿ ಸ್ಥಾನ ಪಡೆಯಲಾಗದ ಗ್ರಾಮೀಣ ಕೃಪಾಂಕದ ೧೬ ಅಭ್ಯರ್ಥಿಗಳನ್ನು ಮೇಲೆ ಓದಲಾದ ಕ್ರಮಸಂಖ್ಯೆ: (೩)ರಲ್ಲಿನ ಅಧಿಸೂಚನೆಯಲ್ಲಿ ಸೇವೆಯಿಂದ ವಿಮೋಚನೆಗೊಳಿಸಲು ಆದೇಶಿಸಲಾಗಿತ್ತು. ಅದರಂತೆ, ಮೇಲೆ ಓದಲಾದ ಕ್ರಮಸಂಖ್ಯೆ: (೪)ರಲ್ಲಿನ ಸರ್ಕಾರದ ಆದೇಶದಲ್ಲಿ ಗ್ರಾಮೀಣ ಕೃಪಾಂಕದಡಿಯಲ್ಲಿ ನೇಮಕಗೊಂಡ ೧೬ ಸಹಾಯಕ ಎಂಟಮಾಲಜಿಸ್ಟ್‌ರನ್ನು ಸರ್ಕಾರದ ಸೇವೆಯಿಂದ ವಿಮೋಚನೆಗೊಳಿಸಲಾಗಿದೆ.

೨.ಗ್ರಾಮೀಣ ಕೃಪಾಂಕ ಸೌಲಭ್ಯದ ನೇಮಕಾತಿಗೆ ಸಂಬಂಧಿಸಿದಂತೆ ಭಾರತದ ಸರ್ವೋಚ್ಛ ನ್ಯಾಯಾಲಯವು ಪ್ರಕರಣಗಳನ್ನು ಕರ್ನಾಟಕ ಆಡಳಿತ ನ್ಯಾಯ ಮಂಡಳಿಗೆ ವರ್ಗಾಯಿಸಿದ ಮೇರೆಗೆ ಮೇಲೆ ಓದಲಾದ ಕ್ರಮಸಂಖ್ಯೆ: (೫)ರಲ್ಲಿ ಕೆ.ಎ.ಟಿ.ಯು ದಿನಾಂಕ: ೦೮-೦೬-೦೫ರ ತನ್ನ ಆದೇಶದಲ್ಲಿ ಪ್ರಕರಣಗಳನ್ನು ವಿಲೇವಾರಿ ಮಾಡಿ ಘನ ಸರ್ವೋಚ್ಛ ನ್ಯಾಯಾಲಯವು ಕರ್ನಾಟಕ ಸಿವಿಲ್ ಸೇವೆಗಳು (ಗ್ರಾಮೀಣ ಕೃಪಾಂಕದ ಸೌಲಭ್ಯದೊಂದಿಗೆ ನೇಮಕಾತಿ ಹೊಂದಿದ ನೌಕರರ ವಿಲೀನಾತಿ) (ವಿಶೇಷ) ನಿಯಮಗಳು ೨೦೦೩ನ್ನು ಜಾರಿಗೊಳಿಸದಂತೆ ದಿನಾಂಕ: ೧೨-೧೨-೦೩ರಂದು ನೀಡಿದ್ದ ತಡೆಯಾಜ್ಞೆಯನ್ನು ತೆರವುಗೊಳಿಸಿದೆ.

೩.ಮೇಲೆ ಓದಲಾದ ಕ್ರಮಸಂಖ್ಯೆ: (೬)ರಲ್ಲಿನ ಸಿಆಸು ಇಲಾಖೆಯ ಸುತ್ತೋಲೆ ದಿನಾಂಕ:೨೭-೦೬-೦೫ರನ್ವಯ ಗ್ರಾಮೀಣ ಕೃಪಾಂಕರಹಿತವಾಗಿ ಆಯ್ಕೆ ಪಟ್ಟಿ ತಯಾರಿಸಿದಾಗ ಅದರಲ್ಲಿ ಸ್ಥಾನ ಪಡೆಯಲಾಗದೇ ಸೇವೆಯಿಂದ ತೆಗೆದು ಹಾಕಲ್ಪಟ್ಟ ಗ್ರಾಮೀಣ ಕೃಪಾಂಕದ ಅಭ್ಯರ್ಥಿಗಳನ್ನು ಕರ್ನಾಟಕ ಸಿವಿಲ್ ಸೇವೆಗಳು (ಗ್ರಾಮೀಣ ಕೃಪಾಂಕದ ಸೌಲಭ್ಯದೊಂದಿಗೆ ನೇಮಕಾತಿ ಹೊಂದಿದ ನೌಕರರ ವಿಲೀನಾತಿ) (ವಿಶೇಷ) ನಿಯಮಗಳು ೨೦೦೩ರನ್ವಯ ಮರು ನೇಮಕಾತಿ ಪ್ರಕ್ರಿಯೆಯನ್ನು ಮುಂದುವರಿಸಬಹುದೆಂದು ನೇಮಕಾತಿ ಪ್ರಾಧಿಕಾರಗಳಿಗೆ ಸೂಚಿಸಲಾಗಿದೆ.

೪.ಮೇಲೆ ಓದಲಾದ ಕ್ರಮಸಂಖ್ಯೆ: (೭)ರಲ್ಲಿ ಆಯುಕ್ತರು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಇವರು ಗ್ರಾಮೀಣ ಕೃಪಾಂಕರಹಿತ ಪರಿಷ್ಕೃತ ಆಯ್ಕೆ ಪಟ್ಟಿಯಲ್ಲಿ ಅರ್ಹತೆಯ ಸ್ಥಾನ ಪಡೆಯಲಾಗದೇ, ಗ್ರಾಮೀಣ ಕೃಪಾಂಕ ಸೌಲಭ್ಯ ಪಡೆದಿದ್ದ ೧೬ ಬಾಕಿ ಉಳಿದಿದ್ದ ಅಭ್ಯರ್ಥಿಗಳಿಗೆ ನೇಮಕಾತಿ ನೀಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

೫.ಈ ಎಲ್ಲಾ ಅಂಶಗಳ ಹಿನ್ನಲೆಯಲ್ಲಿ ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ ೩೬ ಸಿಜಿಇ ೨೦೦೫ ಬೆಂಗಳೂರು ದಿನಾಂಕ: ೧೯ನೇ ಜುಲೈ ೨೦೦೫**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ: ಆಕುಕ ೯೩೯ ಹೆಚ್‌ಎಸ್‌ಹೆಚ್ ೨೦೦೩-೧ ದಿನಾಂಕ:೧೮-೧೨-೨೦೦೩ರಲ್ಲಿ ಸೇವೆಯಿಂದ ವಿಮೋಚನೆಗೊಳಿಸಲ್ಪಟ್ಟ ಸಹಾಯಕ ಎಂಟಮಾಲಜಿಸ್ಟ್‌ರನ್ನು (ವೇತನ ಶ್ರೇಣಿ ರೂ.೫೫೭೫-೧೦೬೨೦) ಈ ಆದೇಶದೊಂದಿಗೆ ಲಗತ್ತಿಸಲಾದ ಅನುಬಂಧದಲ್ಲಿ ಅವರುಗಳ ಹೆಸರಿನ ಮುಂದೆ ಕಾಣಿಸಿರುವ ಸ್ಥಳದಲ್ಲಿ ಕೂಡಲೇ ಜಾರಿಗೆ ಬರುವಂತೆ ನೇಮಕಾತಿ ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಆರ್.ಶಂಕರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ಅನುಬಂಧ**

**ಸರ್ಕಾರದ ಆದೇಶ ಸಂಖ್ಯೆ: ಆಕುಕ ೩೬ ಸಿಜಿಇ ೨೦೦೫ ದಿನಾಂಕ: ೧೯ನೇ ಜುಲೈ ೨೦೦೫**

| ಕ್ರ.ಸಂ. | ಅಭ್ಯರ್ಥಿಗಳ ಹೆಸರು ಮತ್ತು ವಿಳಾಸ | ನಿಯುಕ್ತಿಗೊಳಿಸಿರುವ ಸ್ಥಳ |
|---|---|---|
| ೧ | ರಾಜೇಶ್ ಕುಲಕರ್ಣಿ<br>s/o ಚಂದ್ರಶೇಖರರಾವ್.ಕೆ. ಬಿಂಟಾರಹಳ್ಳಿ ಪೋಸ್ಟ್,<br>ಹಗರಿಬೊಮ್ಮನಹಳ್ಳಿ, ಬಳ್ಳಾರಿ ಜಿಲ್ಲೆ. | ಉಪನಿರ್ದೇಶಕರು, ಎಸ್.ಎ.ಎಂ.ಪಿ.ವಲಯ,<br>ಬೆಳಗಾಂ. |
| ೨ | ಶ್ರೀಕಾಂತ್ ಪಾಟೀಲ್<br>s/o ಪುಟ್ಟಣಗೌಡ ಪಬಿತಾ.<br>c/oಸಲಾ ಬಿಲ್ಡಿಂಗ್ ೩ನೇ ಕ್ರಾಸ್, ಭಾರತಿನಗರ, ಧಾರವಾಡ. | ಜಿಲ್ಲಾ ಸರ್ವೆಲೆನ್ಸ್ ಯುನಿಟ್,<br>D.H.O. ಶಿವಮೊಗ್ಗ |
| ೩ | ಕಿರಣ್.ಎಸ್.ಅಂಬಾಲಿ<br>s/o ಸದಾನಂದ ಅಂಬಾಲಿ<br>c/o ನೂತನ್ ರೇಡಿಯೋ ಸರ್ವೀಸಸ್,<br>ಮೇನ್‌ರೋಡ್, ಸಿದ್ದಾಪುರ ತಾ. ಉತ್ತರ ಕನ್ನಡ ಜಿಲ್ಲೆ | ಜಿಲ್ಲಾ ಸರ್ವೆಲೆನ್ಸ್ ಯುನಿಟ್,<br>D.H.O. ಬೀದರ್, |
| ೪ | ಮಂಜುನಾಥ್.ಟಿ.ಪಿ<br>s/oಸಂಗವ್ವ, c/o ವಿ.ಸಿ.<br>ಸಾವಡಿ, ಮುಬಿಗನ್<br>ಕಾಂಪೌಂಡ್, ಸಪ್ತಾಪುರ, ಧಾರವಾಡ. | ಉಪನಿರ್ದೇಶಕರು, ಎಸ್.ಎಂ.ಇ.ಪಿ.ವಲಯ,<br>ಬೆಳಗಾಂ. |
| ೫ | ಮಹದೇವ ಹಸರೆಡ್ಡಿ s/o ಲಕ್ಷ್ಮಣ ಹಸರಡ್ಡಿ,<br>ಗಿರೀಶ್ ನಗರ, ಜಮಖಂಡಿ,<br>ಬಾಗಲಕೋಟೆ ಜಿಲ್ಲೆ | ಜಿಲ್ಲಾ ಸರ್ವೆಲೆನ್ಸ್ ಯುನಿಟ್,<br>D.H.O ಬಾಗಲಕೋಟೆ |
| ೬ | ಸವಿತ.ಕೆ.ಎಸ್. s/o ನಾರಾಯಣಪ್ಪ.ಕೆ.ವಿ.<br>ನಂ.೨೩೩/೧, ರೇಲ್ವೆ ಆಫೀಸ್ ರೋಡ್,<br>ಪಾಡಿಲ್ ಪುತ್ತೂರು, ದಕ್ಷಿಣ ಕನ್ನಡ ಜಿಲ್ಲೆ. | ಜಿಲ್ಲಾ ಸರ್ವೆಲೆನ್ಸ್ ಯುನಿಟ್,<br>D.H.O ಕೊಡಗು |
| ೭ | ನಂದಿನಿ ಕಡಿ s/o ಸಂಗಪ್ಪ ಕಡಿ<br>ಗುರುಕೃಪ, ಗದಗ್‌ರೋಡ್, ಕೊಪ್ಪಳ. | ಜಿಲ್ಲಾ ಸರ್ವೆಲೆನ್ಸ್ ಯುನಿಟ್,<br>D.H.O ಚಿತ್ರದುರ್ಗ |
| ೮ | ಸುನಂದ.ಎಮ್. w/o ರವಿಕುಮಾರ್.ಎಂ.<br>ನಂ.೧೩೮, ೪ನೇ ಕ್ರಾಸ್, ಎಂ.ಇ.ಐ.ಕಾಲೋನಿ,<br>ಲಗ್ಗೆರೆ ಮೇನ್ ರೋಡ್, ಬೆಂಗಳೂರು. | ರಾಜ್ಯ ವೀಕ್ಷಣಾ ಘಟಕ<br>ಆಕುಕ ನಿರ್ದೇಶನಾಲಯ<br>ಬೆಂಗಳೂರು |
| ೯ | ಇಂದಿರಾ ಪಾಟೀಲ್<br>D/o ನೀಲಪ್ಪಗೌಡ, c/o ಸಿ.ಎಸ್.ಮುಳ್ಳೋಳಿ<br>ಬಿಲ್ಡಿಂಗ್, ಸಾಯಿನಗರ, ಹುಬ್ಬಳ್ಳಿ | ಜಿಲ್ಲಾ ಸರ್ವೆಲೆನ್ಸ್ ಯುನಿಟ್,<br>D.H.O. ಹಾವೇರಿ |
| ೧೦ | ಗಣಾಚಾರಿ ಶಿವರಾಜ್<br>s/o ಚನ್ನಬಸಯ್ಯ ಗಣಾಚಾರಿ.ಡಿ.<br>ಸವಡಿ ಪೋಸ್ಟ್, ಮುದ್ದೇಬಿಹಾಳ, ಬಿಜಾಪುರ | U.K.P. ಆಲಮಟ್ಟಿ,<br>ಬಿಜಾಪುರ |
| ೧೧ | ಶ್ರೀನಿವಾಸ್.ಎಂ. s/o ಮೂರ್ತಿ.ಎಲ್.<br>ಬೇಗೂರು, ಗುಂಡ್ಲುಪೇಟೆ ತಾಲ್ಲೂಕು<br>ಚಾಮರಾಜನಗರ ಜಿಲ್ಲೆ. | ಜಿಲ್ಲಾ ಸರ್ವೆಲನ್ಸ್ ಯುನಿಟ್<br>D.H.O ಹಾಸನ |
| ೧೨ | ರಿಯಾಜ್ ದೇಕ್ಷ s/o ಜಮಾಲ್ ಸಾಬ್,<br>ಎರಗಟ್ಟಿ ಪೋಸ್ಟ್, ಸವದತ್ತಿ ತಾ. ಬೆಳಗಾಂ. | ಜಿಲ್ಲಾ ಸರ್ವೆಲನ್ಸ್ ಯುನಿಟ್<br>D.H.O ಗುಲ್ಬರ್ಗಾ |
| ೧೩ | ಗಣಪತಿ ಬಾರ್ಕಿ s/oಅಜ್ಜಪ್ಪ ಬಾರ್ಕಿ,<br>ಹೊಂಕಣ, ಶೇಷಗಿರಿ ಅಂಚೆ,<br>ಹಾನಗಲ್ ತಾ. ಹಾವೇರಿ | ಜಿಲ್ಲಾ ಸರ್ವೆಲೆನ್ಸ್ ಯುನಿಟ್,<br>D.H.O. ಬೆಳಗಾಂ |
| ೧೪ | ಮಂಜುನಾಥ್.ಜಿ.ಎಸ್. s/o ನೀಲಕಂಠಯ್ಯ<br>ಚಿಕ್ಕನಹಳ್ಳಿ ಪೋಸ್ಟ್, ಹೆಚ್.ಡಿ.ಕೋಟೆ, ಮೈಸೂರು. | ಜಿಲ್ಲಾ ಸರ್ವೆಲೆನ್ಸ್ ಯುನಿಟ್,<br>D.H.O. ಕೋಲಾರ |
| ೧೫ | ರೇಖಾ.ಎಂ. D/o ಮಹದೇವಯ್ಯ<br>ಕಾರೆಮಾಳೆ ಅಂಚೆ, ನಂಜನಗೂಡು ತಾಲ್ಲೂಕು<br>ಮೈಸೂರು ಜಿಲ್ಲೆ | ಜಿಲ್ಲಾ ಸರ್ವೆಲೆನ್ಸ್ ಯುನಿಟ್,<br>D.H.O. ಚಾಮರಾಜನಗರ |

**ಎಸ್.ಆರ್.ಶಂಕರ್**

PR-1049

ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ಕೋಳಿ ಸಾಕಾಣಿಕೆ (ಲೇಯರ್) ಹಾಗೂ ಸ್ವಂತ ಬಂಡವಾಳ ಹೂಡಿ ಸಣ್ಣ/ಅತಿ ಸಣ್ಣ ರೇಷ್ಮೆ ಮತ್ತು ಜವಳಿ ಕೈಗಾರಿಕಾ ಘಟಕಗಳಿಗೆ ವಿವಿಧ ಕೈಗಾರಿಕಾ ನೀತಿಯಡಿಯಲ್ಲಿ ಮಂಜೂರು ಮಾಡಲ್ಪಟ್ಟ ಬಂಡವಾಳ ಹೂಡಿಕೆ ಸಹಾಯಧನ ಘಟಕಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ದಿನಾಂಕ: 14.3.2005ರ ಸರ್ಕಾರದ ಆದೇಶ ಸಂಖ್ಯೆ: ಸಿಐ 51 ಎಸ್‌ಪಿಸಿ 2005
2. ದಿನಾಂಕ: 31.03.2005ರ ಸರ್ಕಾರದ ಆದೇಶ ಸಂಖ್ಯೆ: ಸಿಐ 51 ಎಸ್‌ಪಿಸಿ 2005
3. ದಿನಾಂಕ: 04.07.2005ರ ಸರ್ಕಾರದ ಆದೇಶ ಸಂಖ್ಯೆ: ಸಿಐ 51 ಎಸ್‌ಪಿಸಿ 2005

**ಪ್ರಸ್ತಾವನೆ:**

ಸಣ್ಣ ಮತ್ತು ಅತಿ ಸಣ್ಣ ಕೈಗಾರಿಕಾ ಘಟಕಗಳ ಯೋಜನೆಗೆ ಹೂಡಿದ ಒಟ್ಟು ಸ್ಥಿರ ಬಂಡವಾಳದ ಮೇಲೆ ಮಂಜೂರಾದ ಸಹಾಯಧನವನ್ನು ಬಿಡುಗಡೆ ಮಾಡಲು 2004-05ನೇ ಸಾಲಿನಲ್ಲಿ ನೀಡಿರುವ ಹೆಚ್ಚುವರಿ ಪೂರಕ ಅಂದಾಜು-2 ಮೊತ್ತದಲ್ಲಿ ಲೆಕ್ಕಶೀರ್ಷಿಕೆ 2851-00-102-0-69 (ಯೋಜನೇತರ)106 ಸಣ್ಣ ಕೈಗಾರಿಕಾ ಘಟಕಗಳಿಗೆ ನೀಡಬೇಕಾದ ಬಂಡವಾಳ ಸಹಾಯಧನದ ಅಡಿಯಲ್ಲಿ ಮಂಜೂರಾದ ಘಟಕಗಳಿಗೆ ಬಿಡುಗಡೆ ಮಾಡುವುದಕ್ಕೆ ಸಂಬಂಧಿಸಿದಂತೆ ರೂ.65.00 ಕೋಟಿಗಳನ್ನು ಬಿಡುಗಡೆ ಮಾಡಲು ಉಲ್ಲೇಖ (1)ರ ಆದೇಶದಲ್ಲಿ ಮಂಜೂರಾತಿ ನೀಡಲಾಗಿದೆ. ಅದರಲ್ಲಿ ದಿನಾಂಕ: 1.4.2003 ರಿಂದ 31.3.2004 ರವರೆಗೆ ಸಹಾಯಧನ ಮಂಜೂರಾದ ಘಟಕಗಳಿಗೆ ಶೇ.50ರಷ್ಟು ಸಹಾಯಧನ ರೂ.8.00 ಕೋಟಿಗಳನ್ನು ಉಲ್ಲೇಖ (2)ರ ಆದೇಶದಲ್ಲಿ ಹಾಗೂ ರೂ.26.00 ಕೋಟಿಗಳನ್ನು ಉಲ್ಲೇಖ (3)ರ ಆದೇಶದಲ್ಲಿ ದಿನಾಂಕ: 1.1.99 ರಿಂದ 31.3.2000 ದವರೆಗೂ (ಬೆಂಗಳೂರು ನಗರ ಜಿಲ್ಲೆಗೆ ದಿನಾಂಕ: 1.1.99 ರಿಂದ 31.10.99 ರವರೆಗೂ) ಸಹಾಯಧನ ಮಂಜೂರು ಮಾಡಿದ ಘಟಕಗಳಿಗೆ ಉಳಿದಿರುವ ಶೇ.50 ರಷ್ಟು ಸಹಾಯಧನ ಬಿಡುಗಡೆ ಮಾಡಲಾಗಿದೆ. ಉಳಿದ ರೂ.31.00 ಕೋಟಿ ಸಹಾಯಧನವನ್ನು ಬ್ಯಾಂಕ್ ನಿಂದ ಸಾಲ ಪಡೆದ ಹಾಗೂ ಸ್ವಂತ ಬಂಡವಾಳ ಹೂಡಿ ಪ್ರಾರಂಭಿಸಿದ ಕೋಳಿ ಸಾಕಾಣಿಕೆ (ಲೇಯರ್) ಹಾಗೂ ಸ್ವಂತ ಬಂಡವಾಳ ಹೂಡಿ ಪ್ರಾರಂಭಿಸಿದ ರೇಷ್ಮೆ ಮತ್ತು ಜವಳಿ ಘಟಕಗಳಿಗೆ ಬಿಡುಗಡೆ ಮಾಡಲು ತೀರ್ಮಾನಿಸಿದ್ದು, ಅದರಂತೆ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂ: ಸಿಐ 51 ಎಸ್‌ಪಿಸಿ 2005, ಬೆಂಗಳೂರು, ದಿನಾಂಕ: 22ನೇ ಜುಲೈ 2005 ಯೂನಿಕ್ ಸಂ:48/2005**

1) ಸಣ್ಣ ಮತ್ತು ಅತಿ ಸಣ್ಣ ಕೈಗಾರಿಕಾ ಘಟಕಗಳ ಯೋಜನೆಗೆ ಹೂಡಿದ ಒಟ್ಟು ಸ್ಥಿರ ಬಂಡವಾಳದ ಮೇಲೆ ಮಂಜೂರಾದ ಸಹಾಯಧನವನ್ನು ಬಿಡುಗಡೆ ಮಾಡಲು ಮಂಜೂರಾತಿ ನೀಡಿರುವ ರೂ.65.00 ಕೋಟಿಗಳಲ್ಲಿ ಈಗಾಗಲೇ ರೂ.34.00 ಕೋಟಿ ಬಿಡುಗಡೆ ಮಾಡಲಾಗಿದ್ದು, ಉಳಿದ ರೂ.31.00 ಕೋಟಿಗಳನ್ನು (ಮೂವತ್ತೊಂದು ಕೋಟಿ ರೂಪಾಯಿಗಳು ಮಾತ್ರ) ದಿನಾಂಕ: 1.1.1999 ರಿಂದ 31.3.2003 ರವರೆಗೂ ಸಹಾಯಧನವನ್ನು ಬ್ಯಾಂಕ್‌ನಿಂದ ಸಾಲ ಪಡೆದ ಹಾಗೂ ಸ್ವಂತ ಬಂಡವಾಳ ಹೂಡಿ ಪ್ರಾರಂಭಿಸಿದ ಕೋಳಿ ಸಾಕಾಣಿಕೆ (ಲೇಯರ್) ಹಾಗೂ ಸ್ವಂತ ಬಂಡವಾಳ ಹೂಡಿ ಪ್ರಾರಂಭಿಸಿದ ರೇಷ್ಮೆ ಮತ್ತು ಜವಳಿ ಘಟಕಗಳಿಗೆ ಮಾತ್ರ ಮಂಜೂರಾದ ಸಹಾಯಧನದಲ್ಲಿ ಶೇ. 50ರಷ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

2) ಸರ್ಕಾರಿ ಆದೇಶ ಸಂಖ್ಯೆ: ಸಿಐ 241 ಎಸ್‌ಪಿಐ 2001, ದಿನಾಂಕ: 31.8.2004ರ ಮಾರ್ಗದರ್ಶಿಯಂತೆ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ರಚಿಸಿರುವ ಸಮಿತಿಯು ಸರ್ಕಾರಿ ಆದೇಶದಲ್ಲಿ ಸೂಚಿಸಿರುವ ವರ್ಗಗಳಿಗೆ ಎಲ್ಲಾ ಘಟಕಗಳ ಕಾರ್ಯನಿರ್ವಹಣೆ ಬಗ್ಗೆ ಜಂಟಿ ತಪಾಸಣೆ ನಡೆಸಿ, ಚೆಕ್‌ಲಿಸ್ಟ್‌ನಲ್ಲಿರುವ ನಮೂನೆಯಂತೆ ತಪಾಸಣೆ ಮಾಡಿದ ವರದಿಯ ಆಧಾರದ ಮೇಲೆ ಕಾರ್ಯನಿರತವಾದ ಘಟಕಗಳಿಗೆ ಜ್ಯೇಷ್ಠತೆ ಆಧಾರದ ಮೇಲೆ ದಿನಾಂಕ: 31.8.2005 ರೊಳಗೆ ಸಹಾಯಧನ ಬಿಡುಗಡೆ ಮಾಡುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ. ಎಸ್. ಪಾರ್ವತಿ**

ಸರ್ಕಾರದ ಅಧೀನ ಕಾರ್ಯದರ್ಶಿ (ಸಪ್ರಕೈ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ಚೆಕ್ ಲಿಸ್ಟ್**

**ಕಾರ್ಯನಿರ್ವಹಿಸುತ್ತಿರುವ/ ಮುಚ್ಚಿರುವ ಘಟಕಗಳಿಗೆ ಪ್ರತ್ಯೇಕವಾಗಿ**

1) ಕ್ರಮ ಸಂಖ್ಯೆ
2) ಘಟಕದ ಹೆಸರು ಮತ್ತು ವಿಳಾಸ
3) ಚಟುವಟಿಕೆ
4) ಮಂಜೂರಾದ ದಿನಾಂಕ
5) ವಿಶೇಷ ವಲಯ ವಿವರ
6) ಒಪ್ಪಿಕೊಂಡ ಒಟ್ಟು ಬಂಡವಾಳ
7) ಮಂಜೂರಾದ ಸಹಾಯಧನದ ಒಟ್ಟು ಮೊತ್ತ
8) ಶೇ. 50 ಮಂಜೂರಾದ ಸಹಾಯಧನ
9) ಹಣಕಾಸು ಸಂಸ್ಥೆಯ ಹೆಸರು ಮತ್ತು ವಿಳಾಸ
10) ಘಟಕದ ಈಗಿನ ಪರಿಸ್ಥಿತಿಯ ಬಗ್ಗೆ ವಿವರ

**ಎ. ಎಸ್. ಪಾರ್ವತಿ**

ಪಿ.ಆರ್.1062

ಸರ್ಕಾರದ ಅಧೀನ ಕಾರ್ಯದರ್ಶಿ (ಸಪ್ರಕೈ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ಶಿಕ್ಷಣ ಸಚಿವಾಲಯ

**ವಿಷಯ :** ಮಾಜಿ ಶಿಕ್ಷಣ ಸಚಿವರಾದ ಶ್ರೀ ಎಚ್. ಜಿ. ಗೋವಿಂದಗೌಡ ಅವರ ಹೆಸರಿನಲ್ಲಿ ಪ್ರತಿ ಶಿಕ್ಷಕರ ದಿನಾಚರಣೆಯಿಂದು ರಾಜ್ಯದ ಅತ್ಯುತ್ತಮ ಸರ್ಕಾರಿ ಕನ್ನಡ ಶಾಲೆಗೆ ಪ್ರಶಸ್ತಿ ವಿತರಣೆ-ಮಾರ್ಗ ಸೂಚಿಯನ್ನು ಹೊರಡಿಸುವ ಬಗ್ಗೆ.

**ಓದಲಾಗಿದೆ :**
1. ಶ್ರೀ ಎಂ. ಚಂದ್ರಶೇಖರ್, ಕಾರ್ಯಾಧ್ಯಕ್ಷರು, ಮಲೆನಾಡ ಗಾಂಧಿ ಶ್ರೀ ಎಚ್. ಜಿ. ಗೋವಿಂದಗೌಡ ಸನ್ಮಾನ ಸಮಿತಿ ಅವರ ದಿನಾಂಕ: 20.6.2005ರ ಪತ್ರ.

**ಪ್ರಸ್ತಾವನೆ:**

ಶ್ರೀ ಎಂ. ಚಂದ್ರಶೇಖರ್, ಕಾರ್ಯಾಧ್ಯಕ್ಷರು, ಮಲೆನಾಡ ಗಾಂಧಿ ಶ್ರೀ ಎಚ್. ಜಿ. ಗೋವಿಂದಗೌಡ ಸನ್ಮಾನ ಸಮಿತಿ ಅವರು ಮೇಲೆ ಓದಲಾದ ದಿನಾಂಕ: 20.6.2005ರ ತಮ್ಮ ಪತ್ರದಲ್ಲಿ "ಸುವರ್ಣಪಥ" ಗ್ರಂಥ ಮಾರಾಟದಿಂದ ಬಂದ 6.25 ಲಕ್ಷ ರೂಪಾಯಿಗಳನ್ನು ಅಂಚೆ ಇಲಾಖೆಯಲ್ಲಿ ಠೇವಣಿ ಇಟ್ಟು ಅದರ ಬಡ್ಡಿಯಿಂದ ಪ್ರತಿ ವರ್ಷ ಶಿಕ್ಷಕರ ದಿನಾಚರಣೆಯಂದು ರಾಜ್ಯದ ಅತ್ಯುತ್ತಮ ಸರ್ಕಾರಿ ಕನ್ನಡ ಶಾಲೆಗೆ ಶ್ರೀ ಎಚ್. ಜಿ. ಗೋವಿಂದಗೌಡ ಅವರ ಹೆಸರಿನಲ್ಲಿ ಪ್ರಶಸ್ತಿ ನೀಡಬೇಕೆಂದು ಸಮಿತಿಯು ನಿರ್ಣಯಿಸಿದ್ದು ಈ ಉದ್ದೇಶಕ್ಕಾಗಿ ಮಾರ್ಗಸೂಚಿಯನ್ನು ಹೊರಡಿಸುವಂತೆ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 74 ಯೋಸಕಾ 2005, ಬೆಂಗಳೂರು, ದಿನಾಂಕ: 29ನೇ ಜುಲೈ 2005**
**(ಇಡಿ 33 ಸ್ಕೀಮರ (ಯೂನಿಕ್) 2005, ದಿನಾಂಕ: 29ನೇ ಜುಲೈ 2005)**

ಮಾಜಿ ಶಿಕ್ಷಣ ಮಂತ್ರಿ ಶ್ರೀ ಎಚ್. ಜಿ. ಗೋವಿಂದಗೌಡ ಅವರ ಹೆಸರಿನಲ್ಲಿ ಪ್ರಶಸ್ತಿ ಕೊಡುವ ಸಂಬಂಧ ಸರ್ಕಾರವು ಈ ಕೆಳಕಂಡ ಮಾರ್ಗಸೂಚಿಗಳನ್ನು ಹೊರಡಿಸುತ್ತದೆ.

1. ಪ್ರಶಸ್ತಿಯನ್ನು "ಮಲೆನಾಡ ಗಾಂಧಿ ಶ್ರೀ ಎಚ್. ಜಿ. ಗೋವಿಂದಗೌಡ ಶೈಕ್ಷಣಿಕ ಪ್ರಶಸ್ತಿ" ಎಂದು ಗುರುತಿಸತಕ್ಕದ್ದು.
2. ಸಾರ್ವಜನಿಕ ಶಿಕ್ಷಣ ಇಲಾಖೆಯ ವ್ಯಾಪ್ತಿಯಲ್ಲಿರುವ ಒಂದರಿಂದ ಹತ್ತನೆಯ ತರಗತಿ ವರೆಗಿನ ಸರ್ಕಾರಿ ಶಾಲೆಗೆ ಈ ಪ್ರಶಸ್ತಿಯನ್ನು ಕೊಡುವುದು ಹಾಗೂ ಹಿರಿಯ ಪ್ರಾಥಮಿಕ ಶಾಲೆಗೆ ಒಂದು ಹಾಗೂ ಪ್ರೌಢಶಾಲಾ ವಿಭಾಗಕ್ಕೆ ಒಂದರಂತೆ ಪ್ರಶಸ್ತಿ ಕೊಡುವುದು.
3. ಪ್ರಶಸ್ತಿಯನ್ನು ಪ್ರತಿವರ್ಷದ ಸೆಪ್ಟೆಂಬರ್ 5 ಶಿಕ್ಷಕರ ದಿನಾಚರಣೆಯಂದು ವಿತರಣೆ ಮಾಡುವುದು ಹಾಗೂ ಅಂದು ಶ್ರೀ ಎಚ್.ಜಿ.ಗೋವಿಂದಗೌಡ ಅವರಿಗೆ ಹಾಗೂ ಅವರ ಕುಟುಂಬ ವರ್ಗದವರಿಗೆ ಸಾರ್ವಜನಿಕ ಶಿಕ್ಷಣ ಇಲಾಖೆಯು ಸಮಾರಂಭದ ಆಹ್ವಾನ ಪತ್ರಿಕೆಯನ್ನು ತಪ್ಪದೇ ಕಳುಹಿಸಬೇಕು.
4. ಒಂದು ಸಾರಿ ಪ್ರಶಸ್ತಿ ಕೊಟ್ಟ ಶಾಲೆಗೆ ಮತ್ತೆ ಪ್ರಶಸ್ತಿ ಕೊಡಬಾರದು.
5. ಪ್ರಶಸ್ತಿ ವಿತರಣೆಯನ್ನು ನಾಲ್ಕು ಕಂದಾಯ ವಿಭಾಗಗಳಿಗೂ ಸರದಿ ಆಧಾರದ ಮೇಲೆ ಕೊಡುವುದು.
6. ಉತ್ತಮ ಶಾಲೆಯನ್ನು ಆಯ್ಕೆ ಮಾಡಲು ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರ ಅಧ್ಯಕ್ಷತೆಯಲ್ಲಿ ಇಲಾಖಾ ಸಮಿತಿ ರಚಿಸಬೇಕು ಹಾಗೂ ಶ್ರೀ ಎಚ್. ಜಿ. ಗೋವಿಂದಗೌಡ ಅವರ ಪುತ್ರ ಶ್ರೀ ಎಚ್. ಜಿ. ವೆಂಕಟೇಶ್ ಅವರನ್ನು ಪ್ರಶಸ್ತಿ ಆಯ್ಕೆ ಮತ್ತು ವಿತರಣೆ ಪ್ರಕ್ರಿಯೆಯಲ್ಲಿ ತೊಡಗಿಸಿಕೊಳ್ಳತಕ್ಕದ್ದು. ಪ್ರಶಸ್ತಿಗೆ ಅರ್ಜಿ ಆಹ್ವಾನಿಸಿ ಅದರ ಪರಿಶೀಲನೆಯ ನಂತರ ಪ್ರಶಸ್ತಿ ಘೋಷಿಸಬೇಕು.
7. ಅಗತ್ಯ ಬಿದ್ದಲ್ಲಿ ಸಮಿತಿಯು ಆಯ್ಕೆ ಮಾಡುವಾಗ ಶಿಕ್ಷಣ ತಜ್ಞರು, ಸಾರ್ವಜನಿಕರು ಹಾಗೂ ಸಮಾಜ ಸೇವಕರ ನೆರವು ಪಡೆಯಬಹುದು.
8. ಸನ್ಮಾನ ಸಮಿತಿಯು ಅರ್ಪಿಸುವ 6.25 ಲಕ್ಷ ರೂ.ಗಳನ್ನು ಅಂಚೆ ಇಲಾಖೆಯಲ್ಲಿ ಠೇವಣಿ ಇಟ್ಟಲ್ಲಿ ಶೇಕಡ 8ರಷ್ಟು ಬಡ್ಡಿ ದೊರೆಯುತ್ತದೆ. ಪ್ರತಿ 1 ಲಕ್ಷರೂ ಠೇವಣಿಗೂ 6 ವರ್ಷಗಳ ನಂತರ 10 ಸಾವಿರ ರೂ. ಬೋನಸ್ ದೊರೆಯುತ್ತದೆ. ಈ ಮೊತ್ತವನ್ನು ಸಹ ಮೂಲ ಠೇವಣಿಗೆ ಸೇರಿಸಿಕೊಳ್ಳಬೇಕು ಹಾಗೂ ಅದರಿಂದ ಬರುವ ಬಡ್ಡಿಯಿಂದ ಪ್ರಶಸ್ತಿ ವಿತರಿಸಬೇಕು.
9. ಪ್ರಶಸ್ತಿ ಘೋಷಿಸುವಾಗ ಆಯಾಯಾ ಶಾಲೆಯ ಶೈಕ್ಷಣಿಕ ಚಟುವಟಿಕೆಗಳನ್ನು ಗಮನಿಸಿ ಅವುಗಳ ಮೌಲ್ಯ 'ನಿರ್ಧಾರ ಮಾಡಿ ಪ್ರಶಸ್ತಿ ಕೊಡಬೇಕು.
10. ಪ್ರಶಸ್ತಿ ಪಡೆದ ಶಾಲೆಗಳು ಹಣವನ್ನು ಶೈಕ್ಷಣಿಕ ಚಟುವಟಿಕೆ ಹಾಗೂ ಮೂಲಭೂತ ಸೌಕರ್ಯಗಳ ಅಭಿವೃದ್ಧಿಗೆ ಮಾತ್ರ ಬಳಸಿಕೊಳ್ಳಬೇಕು ಗ್ರಂಥಾಲಯ, ಕಂಪ್ಯೂಟರ್, ಪ್ರಯೋಗಾಲಯ, ಕ್ರೀಡಾಸಾಮಾಗ್ರಿ ಹಾಗೂ ಮಕ್ಕಳ ಸೃಜನ ಶೀಲತೆಯನ್ನು ಹೆಚ್ಚಿಸುವ ಇತರ ಚಟುವಟಿಕೆಗಳು ಇದರಲ್ಲಿ ಸೇರುತ್ತವೆ.
11. ಪ್ರಶಸ್ತಿ ಪಡೆದ ಶಾಲೆಗಳ ಮುಂದೆ "ಮಲೆನಾಡ ಗಾಂಧಿ ಶ್ರೀ ಎಚ್. ಜಿ. ಗೋವಿಂದಗೌಡ ಪ್ರಶಸ್ತಿ ಪುರಸ್ಕೃತ" ಎಂದು ದೊಡ್ಡದಾಗಿ ನಮೂದಿಸಬೇಕು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಶ್ರೀಕಂಠೇಶ್ವರ**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಸಹ ಕಾರ್ಯದರ್ಶಿ (ಯೋಜನೆ), ಶಿಕ್ಷಣ ಇಲಾಖೆ.

ಪಿ.ಆರ್.1072

**ವಿಷಯ :** 2004-2005ನೇ ಶೈಕ್ಷಣಿಕ ಸಾಲಿಗೆ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ. ಎಡ್. ಕೋರ್ಸಿನ ವಿದ್ಯಾರ್ಥಿ ಪ್ರಮಾಣದ ನಿರ್ಧರಣೆ.

**ಓದಲಾಗಿದೆ :**
1. ದಿನಾಂಕ: 14.12.2004 ಸಂ.ಇಡಿ 329 ಯುಆರ್‌ಸಿ 2004ರ ಸರ್ಕಾರಿ ಆದೇಶ
2. ದಿನಾಂಕ: 20.12.2004 ಸಂ. ಇಡಿ 329 ಯುಆರ್‌ಸಿ 2004ರ ಸರ್ಕಾರಿ ಪತ್ರ
3. ದಿನಾಂಕ: 30.12.2004 ಸಂ.ಇಡಿ 329 ಯುಆರ್‌ಸಿ 2004ರ ಸರ್ಕಾರಿ ಆದೇಶ
4. ಸರ್ಕಾರದ ಪತ್ರ ಸಂ. ಇಡಿ 108 ಯುಆರ್‌ಸಿ 2005 ದಿನಾಂಕ: 10.05.2005.
5. ದಿನಾಂಕ: 21.03.2005 ಸಂ. F.SRO/NCTE/ 2004-05/1412ರ/ NCTEಯು ಪ್ರಾದೇಶಿಕ ನಿರ್ದೇಶಕರ ಪತ್ರ.

**ಪೀಠಿಕೆ:**

1) ಸರ್ಕಾರಿ/ ವಿಶ್ವವಿದ್ಯಾಲಯ/ಅನುದಾನಿತ/ ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್‌ಸಿಟಿಇ ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು ಅಧಿನಿಯಮದ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಟಿಸಿಹೆಚ್ ಮತ್ತು ಬಿಇಡಿ ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಅಂತೆಯೇ, 2004-2005ನೇ ಶೈಕ್ಷಣಿಕ ಸಾಲಿನ ಬಿ.ಎಡ್. ಕೋರ್ಸಿನ ಸೀಟ್ ಮ್ಯಾಟ್ರಿಕ್ಸ್‌ನ್ನು ಪ್ರಕಟಿಸಲು ಅನುವಾಗುವಂತೆ ಎನ್‌ಸಿಟಿಇ ಮಾನ್ಯತೆ ಹೊಂದಿದ ಶಿಕ್ಷಣ ಕಾಲೇಜುಗಳ ಪಟ್ಟಿಯನ್ನು ಅನುಮೋದಿತ ವಿದ್ಯಾರ್ಥಿ ಪ್ರಮಾಣದೊಂದಿಗೆ ತಕ್ಷಣ ಒದಗಿಸುವಂತೆ ಎನ್‌ಸಿಟಿಇ-ಎಸ್.ಆರ್.

ಸಿಯ ಪ್ರಾದೇಶಿಕ ನಿರ್ದೇಶಕರನ್ನು ಕೋರಲಾಗಿತ್ತು. ಇದನ್ನು ಪ್ರತಿಕ್ರಯಿಸಿ ದಿನಾಂಕ: 8.02.2005ರ ಪತ್ರದಲ್ಲಿ ಎನ್‌ಸಿಟಿಇಯು ಇತ್ತೀಚಿಗೆ 2004-05ನೇ ಸಾಲಿಗೆ ಹೊಸದಾಗಿ 02 (ಎರಡು) ಬಿ. ಎಡ್. ಕಾಲೇಜಿಗೆ ಮಾನ್ಯತೆ ನೀಡಿರುವ ಪಟ್ಟಿಯನ್ನು ಒದಗಿಸಿದೆ. ಈ ಹಿನ್ನೆಲೆಯಲ್ಲಿ ಸದರಿ ಕಾಲೇಜಿನ ವಿದ್ಯಾರ್ಥಿ ಪ್ರಮಾಣದ ನಿರ್ಧರಣೆಯನ್ನು ಸಂವೀಕ್ಷಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 329 ಯುಆರ್‌ಸಿ 2004 (ಭಾಗ-2) ಬೆಂಗಳೂರು, ದಿನಾಂಕ: 20ನೇ ಜುಲೈ 2005**

3) ದಿನಾಂಕ: 14.12.2004 ಸಂ. ಇಡಿ 329 ಯುಆರ್‌ಸಿ 2004, ದಿನಾಂಕ: 30.12.2004ರ ಸಂಖ್ಯೆ ಇಡಿ 329 ಯುಆರ್‌ಸಿ 2004, ದಿನಾಂಕ:25.02.2005ರ ಸಂ. ಇಡಿ 329 ಯುಆರ್‌ಸಿ 2004(ಭಾಗ) ಹಾಗೂ ದಿನಾಂಕ: 28.03.2005 ಸಂ. ಇಡಿ 329 ಯುಆರ್‌ಸಿ 2004 (ಭಾಗ-2)ರ ಸರ್ಕಾರಿ ಆದೇಶಗಳನ್ನು ಮುಂದುವರೆಸುತ್ತಾ, ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ (18)ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ. ಎಡ್. ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರಿ/ ವಿಶ್ವವಿದ್ಯಾಲಯ/ಅನುದಾನಿತ ಮತ್ತು ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸುತ್ತಿರುವ ಬಿ. ಎಡ್. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು 2004-2005ನೇ ಶೈಕ್ಷಣಿಕ ಸಾಲಿಗೆ ಅನುವಾಗುವಂತೆ ಈ ಕೆಳಕಂಡ 02 (ಎರಡು) ಹೊಸ ಬಿ. ಎಡ್. ಕಾಲೇಜಿನ ವಿದ್ಯಾರ್ಥಿ ಪ್ರಮಾಣವನ್ನು ನಿರ್ದಿಷ್ಟಪಡಿಸಲಾಗಿದೆ. ಸದರಿ ಶಿಕ್ಷಣ ಕಾಲೇಜುಗಳಲ್ಲಿ ವಿದ್ಯಾರ್ಥಿಗಳ ಪ್ರವೇಶವು ದಿನಾಂಕ: 14.12.2004 ಸಂ. ಇಡಿ 329 ಯುಆರ್‌ಸಿ 2004, ದಿನಾಂಕ: 30.12.2004ರ ಸಂಖ್ಯೆ ಇಡಿ 329 ಯುಆರ್‌ಸಿ 2004, ದಿನಾಂಕ: 25.02.2005ರ ಸಂ. ಇಡಿ 329 ಯುಆರ್‌ಸಿ 2004 (ಭಾಗ) ಹಾಗೂ ದಿನಾಂಕ: 28.03.2005 ಸಂ. ಇಡಿ 329 ಯುಆರ್‌ಸಿ 2004 (ಭಾಗ-2)ರ ಆದೇಶಗಳಲ್ಲಿ ಸ್ಪಷ್ಟಪಡಿಸಲಾದ ಷರತ್ತುಗಳಿಗೆ ಒಳಪಟ್ಟಿರುತ್ತದೆ.

| ಕ್ರ. ಸಂ. | ಕಾಲೇಜಿನ ಹೆಸರು | ಎನ್‌ಸಿಟಿಇ ನಿಗದಿಪಡಿಸಿರುವ ಗರಿಷ್ಠ ವಿದ್ಯಾರ್ಥಿ ಪ್ರಮಾಣ | ಷರಾ |
|---|---|---|---|
| 1 | 2 | 3 | 4 |
| | **ಬೆಳಗಾಂ ಜಿಲ್ಲೆ** | | |
| 1. | ಕೆ. ಎಲ್.ಇ. ಸೊಸೈಟೀಸ್ ಕಾಲೇಜ್ ಆಫ್ ಎಜುಕೇಷನ್, ಸಿ.ಎಸ್. ಕಿತ್ತೂರ ಹೈಸ್ಕೂಲ್ ಕ್ಯಾಂಪಸ್, ಅಥಣಿ-591 304, ಬೆಳಗಾಂ ಜಿಲ್ಲೆ. | 100 | |
| | **ಉತ್ತರ ಕನ್ನಡ ಜಿಲ್ಲೆ.** | | |
| 2. | ಕೆ. ಎಲ್.ಇ. ಸೊಸೈಟೀಸ್ ಕಾಲೇಜ್ ಆಫ್ ಎಜುಕೇಷನ್, ಶೇಡ್ಗೇರ್, ನಿಯರ್ ಸುಂದರ ನಾರಾಯಣ ಟೆಂಪಲ್ ರೋಡ್, ಅಂಕೋಲಾ-581314, ಉತ್ತರ ಕನ್ನಡ ಜಿಲ್ಲೆ. | 100 | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುಂದರ ರಾಜ ಗುಪ್ತ**

ಪಿ.ಆರ್.1073

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಶ್ರೀ ಕೆ. ಈಶ್ವರ್ ಭಟ್ ಕುಕ್ಕೆಮನೆ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರಿಗೆ ವಿಚಾರಣಾ ವರದಿ ಸಲ್ಲಿಸಿದ್ದಕ್ಕಾಗಿ ಗೌರವಧನ ವಾಹನ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 27 ಎಸ್‌ಇಎನ್ 2002 ದಿನಾಂಕ: 25.9.2004.

2. ಶ್ರೀ ಕೆ. ಈಶ್ವರ್ ಭಟ್ ಕುಕ್ಕೆಮನೆ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರ ದಿನಾಂಕ: 4.7.05ರ ವಿಚಾರಣಾ ವರದಿ.

**ಪ್ರಸ್ತಾವನೆ:**

ಶ್ರೀ ಶೆಟ್ಟಿಗುಂಡಪ್ಪ, ನಿವೃತ್ತ ಮುಖ್ಯ ಇಂಜಿನಿಯರ್, ಶ್ರೀ ಕೆ. ರವೀಂದ್ರ ಪೈ, ಶ್ರೀ ಜಿ. ಎ. ನರಸಿಂಹಮೂರ್ತಿ, ನಿವೃತ್ತ ಕಾರ್ಯಪಾಲಕ ಇಂಜಿನಿಯರ್ ಶ್ರೀ ಎಸ್. ಟಿ. ಖೊಂಬೆ, ಶ್ರೀ ಆರ್. ಧನಿವಿಠಲ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ಗಳು ಜಲಸಂಪನ್ಮೂಲ ಸಂಸ್ಥೆ, ಬೆಂಗಳೂರು ರವರುಗಳು ದಿನಾಂಕ: 28.5.96 ರಿಂದ 22.2.99 ರವರೆಗೆ ಬೀದರ್ ಜಿಲ್ಲೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ, ವಿಶ್ವಬ್ಯಾಂಕ್ ನೆರವಿನಿಂದ ಜಿಲ್ಲೆಯಲ್ಲಿ ಕೈಗೊಳ್ಳಲಾದ ಸಮಗ್ರ ಗ್ರಾಮೀಣ ನೀರು ಸರಬರಾಜು ಮತ್ತು ಪರಿಸರ ನೈರ್ಮಲ್ಯ ಯೋಜನೆ ಕಾಮಗಾರಿಗಳಿಗೆ ಸಂಬಂಧಿಸಿದಂತೆ ಕಾಮಗಾರಿಗಳು ನಡೆಯದಿದ್ದರೂ ಕಾಮಗಾರಿಗಳು ನಡೆದಿರುವುದಾಗಿ ಗುತ್ತಿಗೆದಾರರು ಸೃಷ್ಟಿಸಿದ ಸುಳ್ಳು ದಾಖಲೆಗಳನ್ನು ಆಧರಿಸಿ ಸುಮಾರು ರೂ.46.6 ಲಕ್ಷಗಳನ್ನು ಗುತ್ತಿಗೆದಾರರಿಗೆ ಪಾವತಿಸಿ ಸರ್ಕಾರದ ಹಣವನ್ನು ದುರುಪಯೋಗ ಮಾಡಿರುವ ಆರೋಪಗಳಿಗಾಗಿ ಶ್ರೀ ಶೆಟ್ಟಿಗುಂಡಪ್ಪ, ನಿವೃತ್ತ ಮುಖ್ಯ ಇಂಜಿನಿಯರ್, ಶ್ರೀ ಕೆ. ರವೀಂದ್ರ ಪೈ, ನಿವೃತ್ತ ಕಾರ್ಯಪಾಲಕ ಇಂಜಿನಿಯರ್, ಶ್ರೀ ಜಿ. ಎ. ನರಸಿಂಹಮೂರ್ತಿ, ನಿವೃತ್ತ ಕಾರ್ಯಪಾಲಕ ಇಂಜಿನಿಯರ್, ಶ್ರೀ ಎಸ್. ಟಿ. ಖೊಂಬೆ, ಶ್ರೀ ಆರ್. ಧನಿವಿಠಲ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಇವರುಗಳ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಸಲುವಾಗಿ ಮೇಲೆ (1) ರಲ್ಲಿ ಓದಲಾದ ದಿನಾಂಕ: 25.9.2004ರ ಸರ್ಕಾರಿ ಆದೇಶದಲ್ಲಿ ಶ್ರೀ ಕೆ. ಈಶ್ವರ್‌ಭಟ್ ಕುಕ್ಕೆಮನೆ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (2) ರಲ್ಲಿ ಓದಲಾದ ದಿನಾಂಕ: 4.7.2005ರ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಈ ಸಂಬಂಧ ಅವರಿಗೆ ಗೌರವಧನ ಹಾಗೂ ವಾಹನಭತ್ಯೆ ಮಂಜೂರು ಮಾಡಲು ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 27 ಎಸ್‌ಇಎನ್ 2002 ಬೆಂಗಳೂರು, ದಿನಾಂಕ: 28ನೇ ಜುಲೈ 2005**

ಸರ್ಕಾರವು ಶ್ರೀ ಕೆ. ಈಶ್ವರ್ ಭಟ್ ಕುಕ್ಕೆಮನೆ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಇವರು ವಿಚಾರಣಾ ವರದಿ ಸಲ್ಲಿಸಿದ ಕಾರಣ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 3 ಸೇಇವಿ 96, ದಿನಾಂಕ: 24.4.1998 ರನ್ವಯ ರೂ.5,000/- (ಐದು ಸಾವಿರ ರೂಪಾಯಿಗಳು ಮಾತ್ರ)

ಗೌರವ ಧನವನ್ನು ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 45 ಸೇಇವಿ 2001, ದಿನಾಂಕ: 4.3.2002 ರನ್ವಯ ರೂ.1,000/- (ಒಂದು ಸಾವಿರ ರೂಪಾಯಿಗಳು ಮಾತ್ರ) ರೂಪಾಯಿಗಳ ವಾಹನ ಭತ್ಯೆಯನ್ನು ಇವರಿಗೆ ಪಾವತಿ ಮಾಡಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಈ ಬಗೆಗಿನ ವೆಚ್ಚವನ್ನು ಆಯವ್ಯಯದ ಲೆಕ್ಕ ಶೀರ್ಷಿಕೆ "2052 ಸಚಿವಾಲಯ ಸಾಮಾನ್ಯ ಸೇವೆಗಳು-090-ಸಚಿವಾಲಯ-01, ಕರ್ನಾಟಕ ಸರ್ಕಾರದ ಸಚಿವಾಲಯ-051 ಸಾಮಾನ್ಯ ವೆಚ್ಚಗಳು" ರಲ್ಲಿ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್. ಆರ್. ನಾಗೇಂದ್ರ**

ಪಿ.ಆರ್.1074 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

**ವಿಷಯ :** ಸುವರ್ಣ ಕರ್ನಾಟಕ ಏಕೀಕರಣದ ಸ್ವರ್ಣ ಜಯಂತಿ ಆಚರಣೆಯ ಸಲುವಾಗಿ ಕರ್ನಾಟಕ ಸರ್ಕಾರ ಸಚಿವಾಲಯದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಲ್ಲಿ ಸೃಜಿಸಲಾಗಿರುವ ವಿಶೇಷಾಧಿಕಾರಿ ಹುದ್ದೆಗೆ ಹೊಂದಿಕೊಂಡಂತೆ ಪೂರಕ ಸಿಬ್ಬಂದಿ ಹುದ್ದೆಗಳನ್ನು ಸೃಜನೆ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 40 ಸಸಿವಿ 2002 ದಿನಾಂಕ: 16.9.2003.
2. ವಿಶೇಷಾಧಿಕಾರಿ, ಸುವರ್ಣ ಕರ್ನಾಟಕ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರ ಅ.ಟಿ.ಸಂಖ್ಯೆ: ಸಂಕಇ 673 ಕಸಧ 05 ದಿನಾಂಕ: 12.5.2005.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ: 16.9.2003ರ ಸರ್ಕಾರದ ಆದೇಶದಲ್ಲಿ ಕರ್ನಾಟಕವು ಏಕೀಕರಣಗೊಂಡು ನವೆಂಬರ್ 2006ಕ್ಕೆ 50 ವರ್ಷಗಳು ತುಂಬುತ್ತಿರುವ ಸಂದರ್ಭದಲ್ಲಿ ಕರ್ನಾಟಕ ಏಕೀಕರಣ ಸ್ವರ್ಣ ಜಯಂತಿ ಮಹೋತ್ಸವವನ್ನು ಆಚರಿಸುವ ಸಲುವಾಗಿ ಕರ್ನಾಟಕ ಸರ್ಕಾರ ಸಚಿವಾಲಯದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಲ್ಲಿ ಒಂದು ವೇತನ ಶ್ರೇಣಿ ರಹಿತ ವಿಶೇಷಾಧಿಕಾರಿ ಹುದ್ದೆಯನ್ನು ದಿನಾಂಕ:31.12.2006 ರವರೆಗೆ ಸೃಜಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾಗಿರುವ ಅನಧಿಕೃತ ಟಿಪ್ಪಣಿಯಲ್ಲಿ ವಿಶೇಷಾಧಿಕಾರಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕರ್ನಾಟಕ ಸರ್ಕಾರ ಸಚಿವಾಲಯ ಇವರು ಸ್ವರ್ಣ ಜಯಂತಿ ಮಹೋತ್ಸವವನ್ನು ಆಚರಿಸುವ ಸಲುವಾಗಿ ಸೃಜಿಸಲಾಗಿರುವ ವಿಶೇಷಾಧಿಕಾರಿ ಹುದ್ದೆಗೆ ಹೊಂದಿಕೊಂಡಂತೆ ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳನ್ನು ಸೃಜಿಸಲು ಪ್ರಸ್ತಾಪಿಸಿರುತ್ತಾರೆ.

| | | |
|---|---|---|
| 1. | ಶೀಘ್ರಲಿಪಿಗಾರ | 1 ಹುದ್ದೆ |
| 2. | ಸಹಾಯಕ | 1 ಹುದ್ದೆ |
| 3. | ದಲಾಯತ್ | 1 ಹುದ್ದೆ |

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 23 ಸಸಿವಿ 2005, ಬೆಂಗಳೂರು, ದಿನಾಂಕ: 25ನೇ ಜುಲೈ 2005**

ಕರ್ನಾಟಕ ಸರ್ಕಾರ ಸಚಿವಾಲಯದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಲ್ಲಿ ಸೃಜಿಸಲಾಗಿರುವ ವಿಶೇಷಾಧಿಕಾರಿ ಸುವರ್ಣ ಕರ್ನಾಟಕ ಹುದ್ದೆಗೆ ಹೊಂದಿಕೊಂಡಂತೆ ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳನ್ನು ದಿನಾಂಕ: 1.11.2005 ರಿಂದ 31.12.2006 ರವರೆಗೆ ಮಾತ್ರ ಆ ಹುದ್ದೆಗಳನ್ನು ರೀ-ಡಿಪ್ಲಾಯಮೆಂಟ್ ಮೂಲಕ ಭರ್ತಿ ಮಾಡುವ ಷರತ್ತಿಗೊಳಪಟ್ಟು ಸೃಜಿಸಲಾಗಿದೆ.

| | | |
|---|---|---|
| 1. | ಶೀಘ್ರಲಿಪಿಗಾರ | 1 ಹುದ್ದೆ |
| 2. | ಸಹಾಯಕ | 1 ಹುದ್ದೆ |
| 3. | ದಲಾಯತ್ | 1 ಹುದ್ದೆ |

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1182/ವೆಚ್ಚ-5/2005, ದಿನಾಂಕ: 16.7.2005ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು. ಪಿ. ಪ್ರಭು**

ಪಿ.ಆರ್.1075 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-2).

**ವಿಷಯ :** ಬಂಡವಾಳ ಹಿಂತೆಗೆಯುವಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸುಧಾರಣೆ ಇಲಾಖೆಯ ಹುದ್ದೆಗಳ ಮುಂದುವರಿಕೆ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 48 ಸಸಿವಿ 2002 ದಿನಾಂಕ: 7.3.2003.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 48 ಸಸಿವಿ 2002 ದಿನಾಂಕ: 3.6.2003.
3. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 17 ಸಸಿವಿ 2004 ದಿನಾಂಕ: 6.1.2005.
4. ಆಡಳಿತಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ, ಬಂಡವಾಳ ಹಿಂತೆಗೆಯುವಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸುಧಾರಣೆ ಇಲಾಖೆ ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ: ಡಿಡಿಪಿಇಆರ್ 23 ಎಂಇಎ 2004, ದಿನಾಂಕ: 10.2.2005.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ: 7.3.2003 ರಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಬಂಡವಾಳ ಹಿಂತೆಗೆಯುವಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸುಧಾರಣೆ ಇಲಾಖೆಗೆ ಒಟ್ಟು 56 ಹುದ್ದೆಗಳನ್ನು ಮಂಜೂರು ಮಾಡಲಾಗಿದೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಬಂಡವಾಳ ಹಿಂತೆಗೆಯುವಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸುಧಾರಣೆ ಇಲಾಖೆಗೆ ಒಂದು ಜಂಟಿ ನಿರ್ದೇಶಕರ ಹುದ್ದೆಯನ್ನು ಹೆಚ್ಚುವರಿಯಾಗಿ ದಿನಾಂಕ: 7.3.2004 ರಿಂದ ಜಾರಿಗೆ ಬರುವಂತೆ ಒಂದು ವರ್ಷದ

ಅವಧಿಗೆ ಮಾತ್ರ ಸೃಜಿಸಲಾಗಿದೆ. ಹಾಗೂ ದಿನಾಂಕ: 7.3.2003ರ ಆದೇಶದಲ್ಲಿ ಮಂಜೂರು ಮಾಡಲಾದ ಒಂದು ಸಹಾಯಕರ ಹುದ್ದೆಯನ್ನು ರದ್ದುಪಡಿಸುವ ನಿಬಂಧನೆಗೊಳಪಟ್ಟು ಒಂದು ಉಪ ನಿರ್ದೇಶಕರ ಹಾಗೂ ಒಂದು ಹಿರಿಯ ಸಹಾಯಕರ ಹುದ್ದೆಗಳನ್ನು ದಿನಾಂಕ: 7.3.2003 ರಿಂದ ಮುಂದುವರಿಸಲು ಮಂಜೂರಾತಿ ನೀಡಲಾಗಿದೆ.

ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ದಿನಾಂಕ: 3.6.2003 ರಲ್ಲಿ ಸೃಜಿಸಲಾದ ಜಂಟಿ ನಿರ್ದೇಶಕರ ಹುದ್ದೆಯನ್ನು ದಿನಾಂಕ: 7.3.2004 ರಿಂದ 6.3.2005 ರವರೆಗೆ ಮುಂದುವರೆಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಸರ್ಕಾರದ ಅಧೀನ ಕಾರ್ಯದರ್ಶಿ, ಡಿ.ಡಿ.ಪಿ.ಇ.ಆರ್. ಇವರು ಸದರಿ ಹುದ್ದೆಗಳ ಕಾಲಾವಧಿಯು ದಿನಾಂಕ: 6.3.2005ಕ್ಕೆ ಮುಕ್ತಾಯವಾಗಿರುವುದರಿಂದ ಆ ಹುದ್ದೆಗಳನ್ನು ಮುಂದುವರೆಸಿ ಆದೇಶ ಹೊರಡಿಸಲು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 14 ಸಸಿವಿ 2005, ಬೆಂಗಳೂರು, ದಿನಾಂಕ: 14ನೇ ಜುಲೈ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯ ಬಂಡವಾಳ ಹಿಂತೆಗೆಯುವಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಇಲಾಖೆಗೆ ಮಂಜೂರು ಮಾಡಿರುವ ಈ ಕೆಳಕಂಡ 58 ಹುದ್ದೆಗಳನ್ನು ದಿನಾಂಕ: 7.3.2005 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲಾಗಿದೆ.

| | | |
|---|---|---|
| 1. | ಅಪರ ನಿರ್ದೇಶಕರು | 01 ಹುದ್ದೆ |
| 2. | ಆರ್ಥಿಕ ಸಲಹೆಗಾರರು | 01 ಹುದ್ದೆ |
| 3. | ಜಂಟಿ ನಿರ್ದೇಶಕರು ಹಾಗೂ ಪದನಿಮಿತ್ತ ಉಪ ಕಾರ್ಯದರ್ಶಿ | 02 ಹುದ್ದೆಗಳು |
| 4. | ಉಪ ನಿರ್ದೇಶಕರು ಹಾಗೂ ಪದನಿಮಿತ್ತ ಅಧೀನ ಕಾರ್ಯದರ್ಶಿ | 04 ಹುದ್ದೆಗಳು |
| 5. | ಆಡಳಿತಾಧಿಕಾರಿ ಹಾಗೂ ಪದನಿಮಿತ್ತ ಅಧೀನ ಕಾರ್ಯದರ್ಶಿ (ಆಡಳಿತ-1) | 01 ಹುದ್ದೆ |
| 6. | ಶಾಖಾಧಿಕಾರಿ | 01 ಹುದ್ದೆ |
| 7. | ಸಹಾಯಕ ನಿರ್ದೇಶಕರು | 02 ಹುದ್ದೆಗಳು |
| 8. | ಪತ್ರಾಂಕಿತ ಆಪ್ತ ಸಹಾಯಕರು | 01 ಹುದ್ದೆ |
| 9. | ಭಾಷಾಂತರಕಾರರು (ಶಾಖಾಧಿಕಾರಿ) | 01 ಹುದ್ದೆ |
| 10. | ಹಿರಿಯ ಸಹಾಯಕರು | 02 ಹುದ್ದೆಗಳು |
| 11. | ಲೆಕ್ಕಪತ್ರ ಅಧೀಕ್ಷಕರು | 01 ಹುದ್ದೆ |
| 12. | ಸಹಾಯಕ ಸಾಂಖ್ಯಿಕ ಅಧಿಕಾರಿ | 01 ಹುದ್ದೆ |
| 13. | ಶೀಘ್ರಲಿಪಿಗಾರರು (ಗಣಕ ಯಂತ್ರ ಜ್ಞಾನವನ್ನು ಹೊಂದಿರುವವರು) | 12 ಹುದ್ದೆಗಳು |
| 14. | ಸಹಾಯಕರು | 03 ಹುದ್ದೆಗಳು |
| 15. | ಡಾಟಾ ಎಂಟ್ರಿ ಆಪರೇಟರ್ | 02 ಹುದ್ದೆಗಳು |
| 16. | ಅಕೌಂಟೆಂಟ್: ಕ್ಯಾಷಿಯರ್ | 02 ಹುದ್ದೆಗಳು |
| 17. | ಕಿರಿಯ ಸಹಾಯಕರು | 05 ಹುದ್ದೆಗಳು |
| 18. | ಬೆರಳಚ್ಚುಗಾರರು | 01 ಹುದ್ದೆ |
| 19. | ಚಾಲಕರು | 04 ಹುದ್ದೆಗಳು |
| 20. | ದಲಾಯತ್ | 11 ಹುದ್ದೆಗಳು |
| | **ಒಟ್ಟು** | **58 ಹುದ್ದೆಗಳು** |

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996ರಲ್ಲಿ ಆರ್ಥಿಕ ಇಲಾಖೆಯು ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು. ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-2).

ಪಿ.ಆರ್.1076

**ಶಿಕ್ಷಣ ಸಚಿವಾಲಯ**

**ವಿಷಯ :** ಕರ್ನಾಟಕ ರಾಜ್ಯದಲ್ಲಿರುವ ಎನ್.ಟಿ.ಟಿ.ಎಫ್. ಸಂಸ್ಥೆಗಳಲ್ಲಿ ಡಿಪ್ಲೊಮೊ ಇನ್ ಕಂಪ್ಯೂಟರ್ ಇಂಜಿನಿಯರಿಂಗ್ ಕೋರ್ಸನ್ನು ವ್ಯಾಸಂಗ ಮಾಡುವ ವಿದ್ಯಾರ್ಥಿಗಳಿಗೆ ಉನ್ನತ ವ್ಯಾಸಂಗ ಮಾಡಲು ಅವಕಾಶ ನೀಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಡಿ 330 ಟಿಪಿಇ 2003 ದಿನಾಂಕ: 29.12.2003.
2. ತಾಂತ್ರಿಕ ಶಿಕ್ಷಣ ನಿರ್ದೇಶಕರ ಪತ್ರ ಸಂಖ್ಯೆ: ಡಿಟಿಇ 67 ಸಿಡಿಸಿ 2002-03 ದಿನಾಂಕ: 25.07.2005.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಎನ್.ಟಿ.ಟಿ.ಎಫ್. ಬೆಂಗಳೂರು ರವರು ನಡೆಸುತ್ತಿರುವ ಕಂಪ್ಯೂಟರ್ ಇಂಜಿನಿಯರಿಂಗ್ ಮತ್ತು ಇನ್‌ಫರ್ಮೇಷನ್ ಟೆಕ್ನಾಲಜಿ ಕೋರ್ಸ್‌ನ ಪಠ್ಯಕ್ರಮಗಳು ತಾಂತ್ರಿಕ ಶಿಕ್ಷಣ ಪರೀಕ್ಷಾ ಮಂಡಳಿಯವರು ನಡೆಸುವ ಕಂಪ್ಯೂಟರ್ ಸೈನ್ಸ್ ಮತ್ತು ಇಂಜಿನಿಯರಿಂಗ್ ಹಾಗೂ ಇನ್‌ಫರ್ಮೇಷನ್ ಟೆಕ್ನಾಲಜಿ ಡಿಪ್ಲೊಮೊ ಕೋರ್ಸುಗಳ ಪಠ್ಯಕ್ರಮಗಳಿಗೆ ಅನುಕ್ರಮವಾಗಿ ಸಮಾನವಾಗಿರುವುದರಿಂದ ಈ

ಕೋರ್ಸ್‌ಗಳನ್ನು ಉದ್ಯೋಗಾವಕಾಶಕ್ಕೆ ಮಾತ್ರ ತಾಂತ್ರಿಕ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಡಿಪ್ಲೊಮೊ ಕೋರ್ಸುಗಳಿಗೆ ಸಮಾನವೆಂದು ಪರಿಗಣಿಸಲು ಆದೇಶಿಸಲಾಗಿದೆ.

2. ಮೇಲೆ (2)ರಲ್ಲಿ ಓದಲಾದ ದಿನಾಂಕ: 25.07.2005ರ ತಾಂತ್ರಿಕ ಶಿಕ್ಷಣ ನಿರ್ದೇಶಕರ ಪತ್ರದಲ್ಲಿ ಎನ್.ಟಿ.ಟಿ.ಎಫ್.ನವರು ಬೋಧಿಸುವ ವಿಷಯಗಳು ತಾಂತ್ರಿಕ ಪರೀಕ್ಷಾ ಮಂಡಳಿಯ ಪಠ್ಯಕ್ರಮಕ್ಕೆ ಅನುಗುಣವಾಗಿರದಿದ್ದರೂ ಪ್ರಾಯೋಗಿಕ ತರಬೇತಿಗೆ ಒತ್ತುಕೊಡುತ್ತಿರುವುದರಿಂದ ಉದ್ಯೋಗಾವಕಾಶಕ್ಕೆ ಮಾತ್ರ ಸಮಾನತೆ ನೀಡಲಾಗಿರುವುದನ್ನು ಗಮನಿಸಬಹುದಾಗಿದೆ. ಪ್ರತಿಯೊಂದು ವಿದ್ಯಾಸಂಸ್ಥೆಗಳು, ಮಂಡಳಿಗಳು: ವಿಶ್ವವಿದ್ಯಾಲಯಗಳು ಅವರ ವಿದ್ಯಾರ್ಥಿಗಳಿಗೆಂದು ರಚಿಸುವ ಪಠ್ಯಕ್ರಮಗಳು ಒಂದಕ್ಕಿಂತ ಮತ್ತೊಂದು ವಿಭಿನ್ನವಾಗಿರುವುದು ಸಹಜವಾಗಿರುತ್ತದೆ.

3. ಎನ್.ಟಿ.ಟಿ.ಎಫ್.ರವರು ತಾಂತ್ರಿಕ ಪರೀಕ್ಷಾ ಮಂಡಳಿಯವರು ಈ ಕೋರ್ಸಿಗೆ ನಿಗದಿಪಡಿಸಲಾದ ಕೆಳಗೆ ಸೂಚಿಸುವ ಕೆಲವೊಂದು ವಿಷಯಗಳನ್ನು ಓದದಿರುವುದು ಎರಡೂ ಸಂಸ್ಥೆಯವರ ಪಠ್ಯಕ್ರಮಗಳನ್ನು ತುಲನಾತ್ಮಕವಾಗಿ ಪರಿಶೀಲಿಸಿದಾಗ ಕಂಡುಬರುತ್ತದೆ.

4. ಪಾಲಿಟೆಕ್ನಿಕ್ ವಿದ್ಯಾರ್ಥಿಗಳು 4ನೇ ಸೆಮಿಸ್ಟರ್‌ನಲ್ಲಿ Networking Administration lab 5ನೇ ಸೆಮಿಸ್ಟರ್‌ನಲ್ಲಿ ISAP lab ಹಾಗೂ 6ನೇ ಸೆಮಿಸ್ಟರ್‌ನಲ್ಲಿ Mobile Computing, Advanced Database System, VB Net lab ಓದುತ್ತಿದ್ದು ಎನ್.ಟಿ.ಟಿ.ಎಫ್ ವಿದ್ಯಾರ್ಥಿಗಳು ಇವುಗಳನ್ನು ಓದದೇ ಇರುವುದು ಕಂಡು ಬರುತ್ತದೆ. ಬೇರೆಲ್ಲಾ ವಿಷಯಗಳು ಶೇಕಡ 80 ರಷ್ಟು ಸಮಾನಾಂತರವಾಗಿರುತ್ತದೆ. ಪ್ರಯುಕ್ತ ಎನ್.ಟಿ.ಟಿ.ಎಫ್. ವಿದ್ಯಾರ್ಥಿಗಳ ಹಿತವನ್ನು ಕಾಪಾಡುವ ಉದಾರ ದೃಷ್ಟಿಯಿಂದ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ 2005-06ನೇ ಸಾಲಿಗೆ ಮಾತ್ರ ಅನ್ವಯಿಸುವಂತೆ ಕಂಪ್ಯೂಟರ್ ಇಂಜಿನಿಯರಿಂಗ್ ಕೋರ್ಸನ್ನು ಈ ವಿದ್ಯಾರ್ಥಿಗಳು ಉನ್ನತ ವ್ಯಾಸಂಗ ಮಾಡಲು ಅನುವಾಗುವಂತೆ ಪಠ್ಯಕ್ರಮಕ್ಕೆ ಸಮಾನಾಂತರ ನೀಡಿ ಆದೇಶ ಹೊರಡಿಸಲು ಕೋರಿರುತ್ತಾರೆ.

1. ತಾಂತ್ರಿಕ ಶಿಕ್ಷಣ ಇಲಾಖೆಯ ಸಂಬಂಧಿಸಿದ ವಿಭಾಗದ ಅಧಿಕಾರಿಗಳಿಗೆ ಕರ್ನಾಟಕ ರಾಜ್ಯದಲ್ಲಿರುವ ಎಲ್ಲಾ ಎನ್.ಟಿ.ಟಿ.ಎಫ್‌ಗಳ ಎಲ್ಲಾ ಸಮಿತಿ ಪ್ರವೇಶ/ ಶೈಕ್ಷಣಿಕ/ ಪರೀಕ್ಷಾ ಸಮಿತಿಗಳಲ್ಲಿ ಮಾನಿಟರಿಂಗ್ ಸಲುವಾಗಿ ಪ್ರತಿನಿಧಿಸುವಿಕೆಗೆ ಅವಕಾಶ ಕೊಡುವುದು.
2. ಎನ್.ಟಿ.ಟಿ.ಎಫ್ ಪಠ್ಯಕ್ರಮಗಳಲ್ಲಿ ಪ್ರಾಯೋಗಿಕ ತರಬೇತಿ ಹೆಚ್ಚಿದ್ದು ಹಾಗೂ ಪರೀಕ್ಷಕರೆಲ್ಲಾ ಅವರೇ ಆಗಿರುವುದರಿಂದ ಅವರ ಇಂಟರ್‌ನಲ್ ಅಸೆಸ್‌ಮೆಂಟ್ ಅಂಕಗಳನ್ನು ಪರಿಗಣಿಸದೇ ಕೇವಲ ಅಂತಿಮ ಪರೀಕ್ಷಾ ಅಂಕಗಳನ್ನು ಪರಿಗಣಿಸುವುದು.
3. ತಾಂತ್ರಿಕ ಪರೀಕ್ಷಾ ಮಂಡಳಿಯಿಂದ ಜರುಗಿಸಲ್ಪಡುವ ಕಂಪ್ಯೂಟರ್ ಸೈನ್ಸ್ ಮತ್ತು ಇಂಜಿನಿಯರಿಂಗ್ ಕೋರ್ಸಿನ 4ನೇ ಸೆಮಿಸ್ಟರ್‌ನ Networking Administration lab 5ನೇ ಸೆಮಿಸ್ಟರ್‌ನಲ್ಲಿ ISAP lab ಹಾಗೂ 6ನೇ ಸೆಮಿಸ್ಟರ್‌ನಲ್ಲಿ Mobile Computing, Advanced Database System, ಮತ್ತು VB Net lab ವಿಷಯಗಳನ್ನು ಉನ್ನತ ವ್ಯಾಸಂಗಕ್ಕೆ ಪ್ರವೇಶ ಪಡೆದ ವರ್ಷದಲ್ಲಿ ತೇರ್ಗಡೆ ಹೊಂದುವುದು.

ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 270 ಟಿಪಿಇ 2004 ಬೆಂಗಳೂರು, ದಿನಾಂಕ: 28ನೇ ಜುಲೈ 2005**

ತಾಂತ್ರಿಕ ಶಿಕ್ಷಣ ನಿರ್ದೇಶಕರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದ ಸರ್ಕಾರವು 2005-06ನೇ ಸಾಲಿಗೆ ಮಾತ್ರ ಅನ್ವಯಿಸುವಂತೆ ಎನ್.ಟಿ.ಟಿ.ಎಫ್, ಬೆಂಗಳೂರು ರವರು ನಡೆಸುತ್ತಿರುವ ಕಂಪ್ಯೂಟರ್ ಎಂಜಿನಿಯರಿಂಗ್ ಕೋರ್ಸನ್ನು ಪೂರ್ಣಗೊಳಿಸಿರುವ ವಿದ್ಯಾರ್ಥಿಗಳು ಉನ್ನತ ವ್ಯಾಸಂಗ ಮಾಡಲು ಅನುವಾಗುವಂತೆ ಈ ಕೋರ್ಸು ತಾಂತ್ರಿಕ ಶಿಕ್ಷಣ ಪರೀಕ್ಷಾ ಮಂಡಳಿ ನಡೆಸುವ ಡಿಪ್ಲೊಮೊ ಇನ್ ಕಂಪ್ಯೂಟರ್ ಸೈನ್ಸ್ ಕೋರ್ಸಿಗೆ ಸಮಾನವೆಂದು ಈ ಕೆಳಕಂಡ ಷರತ್ತುಗಳಿಗೊಳಪಡಿಸಿ ಪರಿಗಣಿಸಿ ಸರ್ಕಾರವು ಆದೇಶಿಸಿದೆ.

1. ತಾಂತ್ರಿಕ ಶಿಕ್ಷಣ ಇಲಾಖೆಯ ಸಂಬಂಧಿಸಿದ ವಿಭಾಗದ ಅಧಿಕಾರಿಗಳಿಗೆ ಕರ್ನಾಟಕ ರಾಜ್ಯದಲ್ಲಿರುವ ಎಲ್ಲಾ ಎನ್.ಟಿ.ಟಿ.ಎಫ್‌ಗಳ ಎಲ್ಲಾ ಸಮಿತಿ ಪ್ರವೇಶ/ ಶೈಕ್ಷಣಿಕ/ ಪರೀಕ್ಷಾ ಸಮಿತಿಗಳಲ್ಲಿ ಮಾನಿಟರಿಂಗ್ ಸಲುವಾಗಿ ಪ್ರತಿನಿಧಿಸುವಿಕೆಗೆ ಅವಕಾಶ ಕೊಡುವುದು.
2. ಅಭ್ಯರ್ಥಿಗಳು ಇಂಟರ್‌ನಲ್ ಅಸೆಸ್‌ಮೆಂಟ್ ಅಂಕಗಳನ್ನು ಪರಿಗಣಿಸದೇ ಕೇವಲ ಅಂತಿಮ ಪರೀಕ್ಷಾ ಅಂಕಗಳನ್ನು ಪರಿಗಣಿಸುವುದು.
3. ತಾಂತ್ರಿಕ ಪರೀಕ್ಷಾ ಮಂಡಳಿಯಿಂದ ಜರುಗಿಸಲ್ಪಡುವ ಕಂಪ್ಯೂಟರ್ ಸೈನ್ಸ್ ಮತ್ತು ಇಂಜಿನಿಯರಿಂಗ್ ಕೋರ್ಸಿನ 4ನೇ ಸೆಮಿಸ್ಟರ್‌ನ Networking Administration lab 5ನೇ ಸೆಮಿಸ್ಟರ್‌ನಲ್ಲಿ ISAP lab ಹಾಗೂ 6ನೇ ಸೆಮಿಸ್ಟರ್‌ನಲ್ಲಿ Mobile Computing, Advanced Database System, ಮತ್ತು VB Net lab ವಿಷಯಗಳನ್ನು ಉನ್ನತ ವ್ಯಾಸಂಗಕ್ಕೆ ಪ್ರವೇಶ ಪಡೆದ ವರ್ಷದಲ್ಲಿ ತೇರ್ಗಡೆ ಹೊಂದುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಎಸ್. ವೇಣುಗೋಪಾಲ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ.

ಪಿ.ಆರ್.1077

## ಒಳಾಡಳಿತ ಸಚಿವಾಲಯ

**ವಿಷಯ :** ಬೆಂಗಳೂರು ನಗರದ ಪೋಲೀಸ್ ಇಲಾಖೆಯ ಕಟ್ಟಡಗಳ ದುರಸ್ಥಿ ಹಾಗೂ ನೆಲಸಮಗೊಳಿಸುವುದಕ್ಕೆ ಖಾಸಗಿ ಸಹಭಾಗಿತ್ವವನ್ನು ಪಡೆಯುವ ಬಗ್ಗೆ

**ಓದಲಾಗಿದೆ :** ಇನ್ಸ್‌ಪೆಕ್ಟರ್ ಜನರಲ್ ಆಫ್ ಪೋಲೀಸ್ (ಇಂಟ್ಲಿಜೆನ್ಸ್) ಮತ್ತು ಕನ್ವಿನರ್ ರಾಮಲಿಂಗಂ ಕಮಿಟಿ ಬೆಂಗಳೂರು ಇವರ ಪತ್ರ ಸಂಖ್ಯೆ:29/ಐಜಿಪಿ/ಎಟಿಸಿ/ಆರ್‌ಆರ್‌ಸಿ/2005 ದಿನಾಂಕ:29/4/2005.

**ಪ್ರಸ್ತಾವನೆ:**

ಇನ್ಸ್‌ಪೆಕ್ಟರ್ ಜನರಲ್ ಆಫ್ ಪೋಲೀಸ್ (ಇಂಟ್ಲಿಜೆನ್ಸ್) ಮತ್ತು ಕನ್ವಿನರ್ ರಾಮಲಿಂಗಂ ಕಮಿಟಿ ಬೆಂಗಳೂರು ಇವರ ಪತ್ರ ದಿನಾಂಕ:29/4/2005ರಲ್ಲಿ ರಾಜ್ಯದಲ್ಲಿರುವ ಎಲ್ಲಾ ಪೋಲೀಸ್ ಠಾಣೆಗಳು ಕರ್ನಾಟಕ ಸರ್ಕಾರಕ್ಕೆ ಸೇರಿದ್ದು, ಇವುಗಳನ್ನು ಲೋಕೋಪಯೋಗಿ ಇಲಾಖೆ ನಿರ್ವಹಿಸುತ್ತಾ ಬಂದಿದೆ. ಪೋಲೀಸ್ ಠಾಣೆಗಳ ನಿರ್ಮಾಣ, ಕಟ್ಟಡಗಳ ದಿನನಿತ್ಯದ ನಿರ್ವಹಣೆಯನ್ನು ಲೋಕೋಪಯೋಗಿ ಇಲಾಖೆಯು ನಿರ್ವಹಿಸುತ್ತಿದೆ. ಪ್ರತಿ ವರ್ಷ ಪೋಲೀಸ್ ಇಲಾಖೆಯು

ಆದ್ಯತೆ ಮೇರೆಗೆ ಪೋಲೀಸ್ ಠಾಣೆಗಳನ್ನು ನಿರ್ಮಿಸುವುದು ಅವುಗಳನ್ನು ನವೀಕರಿಸುವುದು, ಮುಂತಾದವುಗಳನ್ನು ಲಭ್ಯವಿರುವ ಅನುದಾನದಲ್ಲಿ ನಿರ್ವಹಿಸಲಾಗುತ್ತದೆ. ಲೋಕೋಪಯೋಗಿ ಇಲಾಖೆಯು ಕೆಲವು ವರ್ಷಗಳಿಂದ ಅತಿ ಹೆಚ್ಚು ಪೋಲೀಸ್ ಠಾಣೆಗಳನ್ನು ನಿರ್ಮಿಸುತ್ತಾ ಬಂದಿದೆ. ಆದಾಗ್ಯೂ ಅನುದಾನದ ಅಲಭ್ಯತೆಯಿಂದ ಸರ್ಕಾರವು ಕರ್ನಾಟಕ ರಾಜ್ಯ ಪೋಲೀಸ್ ಗೃಹ ನಿರ್ಮಾಣ ನಿಗಮ ನಿಯಮಿತವನ್ನು ಸ್ಥಾಪಿಸಿದೆ. ಕರ್ನಾಟಕ ಸರ್ಕಾರವು ಈ ಸಂಸ್ಥೆಗೆ ಹಣಕಾಸು ಸಂಸ್ಥೆಗಳಿಂದ ಹಣವನ್ನು ಸಾಲ ಪಡೆದು ಪೋಲೀಸ್ ಠಾಣೆಗಳನ್ನು ಕಟ್ಟಲು ಅಧಿಕಾರ ನೀಡಿದೆ. ಇದರ ಜೊತೆಗೆ ಕರ್ನಾಟಕ ಭೂಸೇನಾ ನಿಗಮವು ಸಹ ಪೋಲೀಸ್ ಠಾಣೆಗಳನ್ನು ನಿರ್ಮಿಸಿದೆ. ಪ್ರಸ್ತುತ ಪೋಲೀಸ್ ಇಲಾಖೆಯಲ್ಲಿ ಖಾಸಗಿ ಸಂಸ್ಥೆಗಳ ಸಹಭಾಗಿತ್ವದಲ್ಲಿ ಪೋಲೀಸ್ ಠಾಣೆಗಳನ್ನು ಕಟ್ಟಲು ರಾಮಲಿಂಗಂ ಕಮಿಟಿ ಪರಿಶೀಲಿಸುತ್ತಿದೆ. ಪೋಲೀಸ್ ಇಲಾಖೆಯಲ್ಲಿ ಪ್ರತಿಯೊಂದು ಸಂದರ್ಭದಲ್ಲಿಯೂ ಪೋಲೀಸ್ ಠಾಣೆಗಳನ್ನು ನಿರ್ಮಿಸುವ ಸಂದರ್ಭದಲ್ಲಿ ಹಣದ ಅಭಾವ ತಲೆದೋರುತ್ತದೆ. ಆದ್ದರಿಂದ ಇಲಾಖೆಯು ಆದ್ಯತೆ ಮೇರೆಗೆ ಪೋಲೀಸ್ ಠಾಣೆಗಳನ್ನು ನಿರ್ಮಿಸುವ ವಿಷಯವು ಆದ್ಯತೆ ವಿಷಯವಾಗಿರುತ್ತದೆ. ಪ್ರಸ್ತುತ ಬಹು ಮುಖ್ಯವಾದ ವಿಷಯವೇನೆಂದರೆ ಪೋಲೀಸ್ ಇಲಾಖೆಯಲ್ಲಿ ಯಾವ ಹಂತದಲ್ಲಿ ಖಾಸಗಿ ಸಹಭಾಗಿತ್ವದಲ್ಲಿ ಪೋಲೀಸ್ ಠಾಣೆಗಳನ್ನು ನಿರ್ಮಿಸಬಹುದು. ಎಂಬ ಬಗ್ಗೆ ರಾಮಲಿಂಗಂ ಕಮಿಟಿಯು ಪರಿಶೀಲಿಸಿದೆ. ಅದರಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದೆ.

ಇನ್ಸ್‌ಪೆಕ್ಟರ್ ಜನರಲ್ ಆಫ್ ಪೋಲೀಸ್ (ಇಂಟ್ಲಿಜೆನ್ಸ್), ಬೆಂಗಳೂರು ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಹೆಚ್‌ಡಿ:14:ಪಿಬಿಎಲ್:2005 ಬೆಂಗಳೂರು ದಿನಾಂಕ: 15ನೇ ಜುಲೈ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಪೋಲೀಸ್ ಇಲಾಖೆಯಲ್ಲಿ ಖಾಸಗಿ ಸಹಭಾಗಿತ್ವದಲ್ಲಿ ಪೋಲೀಸ್ ಠಾಣೆಗಳನ್ನು ನವೀಕರಣಗೊಳಿಸುವುದು ಹಾಗೂ ಹೊಸದಾಗಿ ನಿರ್ಮಾಣ ಮಾಡುವ ಸಂಬಂಧ ರಾಮಲಿಂಗಂ ಕಮಿಟಿಯ ಕೆಳಕಂಡ ಮಾರ್ಗದರ್ಶಿ ಸೂತ್ರಗಳನ್ನು ಸರ್ಕಾರವು ಒಪ್ಪಿದೆ.

1. All the police buildings belong to the government are vested with the Public Works Department. Any alteration or construction in the Government land should be done with the permission of the Public Works Department. It may be added that no Government land could be utilized without express sanction of the Government.
2. Any bulding of the government should not be demolished unless it is certified by the Public Works Department as unfit for occupation.
3. If renovations or alterations are required, the plan and estimate should be approved by the PWD.
4. In the case of Police Benevolent Fund also, the department has to take prior permission of Government for accepting contributions from private individuals.
5. As contributions for renovation or construction of police station buildings involve huge sums of money, the antecedent of donors assumes importance. It is the common knowledge that no businessman or individual is going to spend huge sums of money without corresponding returns to himself in some manner or the other. It is for this reason, the Government Departments are prohibited from accepting any financial contribution from private individuals.
6. If it is necessary to take some financial assistance for such construction activities, contributions may be accepted from the reputed public limited companies, such as Infosys, Wipro etc. In such contributions, the police department should also have a prior permission of the Government of Karnataka.
7. The Financial code of the Government of Karnataka is very clear that all activities connected with the financial contribution of private person in Government activity should have an express sanction of the Government.
8. The matter of financial contribution to police buildings will not fall under the purview of better police public relations, as it involves powerful individuals and not the common man.
9. The name of the contributor should not figure anywhere prominently in the police station buildings as donor, except in the plaque along with other names.
10. **Rule-13 of the Karnataka Civil Services (Conduct) Rules, 1966** clearly lays down the provision regarding the acceptance of contributions from the public, which reads, "No Government Servant shall, except with the previous sanction of the Government or of the prescribed authority, ask for or accept contributions to, or otherwise associate himself with the raising of, any funds other collections in cash or in kind in pursuance of any object whatsoever". Similarly, **Rule-10 of the All India Services (Conduct) Rules, 1968** provides that, "No member of the service shall, except with the previous sanction of the Government or of such authority as may be empowered by it in this behalf ask for, or accept, contributions to or otherwise associate himself with the raising of any fund or other collections in cash or in kind in pursuance of any object whatsoever".
11. According to PWD (Building Division), a certificate should be obtained from the department regarding the technical opinion about the condition of Government building before demolishing it, which will be issued only after inspecting the building. Wherever alterations to a Government building become necessary, the user department should obtain the revised drawings from the

Chief Architect, PWD, Bangalore. Unless these requirements are complied, the Government building cannot be demolished or altered under any circumstances.

ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ:1: ಟಿಎಫ್‌ಪಿ: 2003 ದಿನಾಂಕ:12/6/2003ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಲಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1078

**ಎಸ್. ರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ವೆಚ್ಚ).

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

**ವಿಷಯ :** ಕೃಷಿ ವಿಶ್ವವಿದ್ಯಾನಿಲಯ ಬೆಂಗಳೂರು ಮತ್ತು ಧಾರವಾಡದಲ್ಲಿ ಇನ್ಸ್‌ಸ್ಟ್ರಕರ್‌ಗಳಾಗಿ: ಸಂಶೋಧನಾ ಸಹಾಯಕ: ವಿಸ್ತರಣಾ ಮಾರ್ಗದರ್ಶಿಯಾಗಿ ಸೇವೆ ಸಲ್ಲಿಸಿ ಈಗ ಸಹಾಯಕ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸುತ್ತಿರುವವರಿಗೆ ಯುಜಿಸಿ: ಐಸಿಎಆರ್‌ನ ವೃತ್ತಿಪರ ಬಡ್ತಿ ಯೋಜನೆಯಲ್ಲಿ ಸೇವಾವಧಿ ಪರಿಗಣಿಸುವ ಬಗ್ಗೆ ಆದೇಶ.

**ಓದಲಾಗಿದೆ :**
1. ಕೃಷಿ ವಿಶ್ವವಿದ್ಯಾನಿಲಯ ಧಾರವಾಡ ಇವರ ಪತ್ರ ಸಂಖ್ಯೆ: ಆರ್: ಆರ್‌ಇಸಿಟಿಟಿ: ಸಿಎಎಸ್: 2000: 1874: ಸಿ ದಿನಾಂಕ:17.2.2000.
2. ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಅಕ: ನೇವಿ: ಭೋ: ಸಿಎಎಸ್: 2003-04 ದಿನಾಂಕ: 5.6.2003.
3. ಶಿಕ್ಷಕರ ಸಂಘ, ಕೃಷಿ ವಿಶ್ವವಿದ್ಯಾನಿಲಯ, ಧಾರವಾಡ ಇವರ ಮನವಿ ದಿನಾಂಕ: 30.10.2004, ಬೆಂಗಳೂರು ಇವರ ಮನವಿ ದಿನಾಂಕ: 6.10.2004 ಸಲ್ಲಿಸಿರುವ ಮನವಿಗಳು.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಪ್ರಸ್ತಾವನೆಯಲ್ಲಿ ಕುಲಸಚಿವರು ಕೃಷಿ ವಿಶ್ವವಿದ್ಯಾನಿಲಯ ಧಾರವಾಡ ಇವರು ಸರ್ಕಾರದ ಆದೇಶ ಸಂಖ್ಯೆ: ಇಡಿ 210 ಡಿಸಿಇ 94 ದಿನಾಂಕ: 21.12.96 ಹಾಗೂ ನಿರ್ದೇಶಕರು, ಕಾಲೇಜು ಶಿಕ್ಷಣ ಇವರ ಸುತ್ತೋಲೆ ಸಂಖ್ಯೆ: ಡಿಸಿಇ 62 ಇಡಿಆರ್ 94 ದಿನಾಂಕ: 9.1.97ರಲ್ಲಿ ಯು.ಜಿ.ಸಿ.ಯವರು ಕೇರಿಯರ್ ಅಡ್ವಾನ್ಸ್‌ಮೆಂಟ್ ಸ್ಕೀಮ್ 1986ರಲ್ಲಿ ಬಡ್ತಿಗಾಗಿ ಹಿಂದಿನ ಯಾವ ಯಾವ ಹುದ್ದೆಯಲ್ಲಿ ಸಲ್ಲಿಸಿರುವ ಸೇವಾ ವಿವರಗಳನ್ನು ಪರಿಗಣಿಸಿ ದಿನಾಂಕ: 1.1.86ರಿಂದ ಪೂರ್ವಾನ್ವಯವಾಗುವಂತೆ ಹೊರಡಿಸಿರುವ ಆದೇಶದ ಪ್ರಕಾರ ಕೃಷಿ ವಿಶ್ವವಿದ್ಯಾನಿಲಯ, ಧಾರವಾಡದಲ್ಲಿ ಕೂಡ ಅದೇ ರೀತಿ ಅಳವಡಿಸಿಕೊಂಡು ಭೋದಕರು: ಸಂಶೋಧನಾ ಸಹಾಯಕರು: ವಿಸ್ತರಣಾ ಮಾರ್ಗದರ್ಶಿಗಳೆಂದು ಸಲ್ಲಿಸಿದ ಸೇವೆಯನ್ನು ಪರಿಗಣಿಸಿ ದಿನಾಂಕ: 1.1.86 ರಿಂದ ಪೂರ್ವಾನ್ವಯವಾಗುವಂತೆ ಆದೇಶವನ್ನು ಸರ್ಕಾರದಿಂದ ಪಡೆಯಲು ಆಡಳಿತ ಮಂಡಳಿಯ ಒಪ್ಪಿಗೆಯನ್ನು ನೀಡಿದ್ದು, ಸರ್ಕಾರವು ಈ ವಿಷಯ ಪರಿಶೀಲಿಸಿ ಶಿಕ್ಷಣ ಇಲಾಖೆ ಹೊರಡಿಸಿರುವ ದಿನಾಂಕ: 21.12.96ರ ಆದೇಶದಂತೆ ಕೃಷಿ ವಿಶ್ವವಿದ್ಯಾನಿಲಯ ಧಾರವಾಡದಲ್ಲಿ ಭೋಧಕರು: ಸಂಶೋಧನಾ ಸಹಾಯಕರು: ವಿಸ್ತರಣಾ ಮಾರ್ಗದರ್ಶಿಗಳೆಂದು ಸಲ್ಲಿಸಿರುವ ಸೇವೆಯನ್ನು ಕೇರಿರ್ ಅಡ್ವಾನ್ಸ್‌ಮೆಂಟ್ ಸ್ಕೀಮ್ 1986ರನ್ವಯ ದಿನಾಂಕ: 1.1.86 ರಿಂದ ಪೂರ್ವಾನ್ವಯವಾಗುವಂತೆ ಪರಿಗಣಿಸಿ ಆದೇಶ ಹೊರಡಿಸಲು ಕೋರಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಕುಲಸಚಿವರು ಕೃಷಿ ವಿಶ್ವವಿದ್ಯಾನಿಲಯ ಬೆಂಗಳೂರು ಇವರು ಸಲ್ಲಿಸಿದ ಪ್ರಸ್ತಾವನೆಯಲ್ಲಿ ಶಿಕ್ಷಣ ಇಲಾಖೆಯ ದಿನಾಂಕ: 21.12.96ರ ಆದೇಶದಲ್ಲಿ ಯು.ಜಿ.ಸಿ. ವೇತನ ಶ್ರೇಣಿಯಲ್ಲಿ ಹಿರಿಯ ಶ್ರೇಣಿ ಮತ್ತು ಆಯ್ಕೆ ಶ್ರೇಣಿಯಲ್ಲಿ ಸ್ಥಾನೀಕರಣ ಹೊಂದಲು ಪರಿಗಣಿಸಿ ಆದೇಶಿಸಿದಂತೆ ಬೆಂಗಳೂರಿನ ಕೃಷಿ ವಿಶ್ವವಿದ್ಯಾನಿಲಯದಲ್ಲಿ ಕೆಲಸ ನಿರ್ವಹಿಸುತ್ತಿರುವ ಭೋದಕರು: ಸಂಶೋಧನಾ ಸಹಾಯಕರು: ವಿಸ್ತರಣಾ ಮಾರ್ಗದರ್ಶಿಗಳಾಗಿ ಸಲ್ಲಿಸಿದ ಸೇವೆಯನ್ನು ಕೇರಿಯರ್ ಅಡ್ವಾನ್ಸ್‌ಮೆಂಟ್ ಸ್ಕೀಮ್‌ನಲ್ಲಿ ಬಡ್ತಿ ನೀಡಲು ಸೇವಾವಧಿಗೆ ಪರಿಗಣಿಸುವ ಬಗ್ಗೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ (3)ರಲ್ಲಿ ಓದಲಾದ ಶಿಕ್ಷಕ ಸಂಘ ಕೃಷಿ ವಿಶ್ವವಿದ್ಯಾನಿಲಯ ಧಾರವಾಡ: ಬೆಂಗಳೂರು ಇವರು ಮನವಿ ಸಲ್ಲಿಸಿ, ಕೃಷಿ ವಿಶ್ವವಿದ್ಯಾನಿಲಯದ ಸಹಾಯಕ ಪ್ರಾಧ್ಯಾಪಕರು ಈ ಹಿಂದೆ ಭೋದಕರು: ಸಂಶೋಧನಾ ಸಹಾಯಕರು: ವಿಸ್ತರಣಾ ಮಾರ್ಗದರ್ಶಿಗಳೆಂದು ಸಲ್ಲಿಸಿದ ಸೇವೆಯನ್ನು ಪರಿಗಣಿಸಿ ಕೇರಿಯರ್ ಅಡ್ವಾನ್ಸ್‌ಮೆಂಟ್ ಸ್ಕೀಮ್‌ನಲ್ಲಿ ಸಹಾಯಕ ಪ್ರಾಧ್ಯಾಪಕ (ಹಿರಿಯ ಶ್ರೇಣಿ) ಹಾಗೂ ಸಹಾಯಕ ಪ್ರಾಧ್ಯಾಪಕ ಆಯ್ಕೆ ಶ್ರೇಣಿ ಮತ್ತು ಸಹ ಪ್ರಾಧ್ಯಾಪಕ ಹುದ್ದೆಗೆ ಬಡ್ತಿ ನೀಡಲು ಸೇವಾವಧಿಗೆ ಪರಿಗಣಿಸುವ ಬಗ್ಗೆ ಸರ್ಕಾರವನ್ನು ಕೋರಿರುತ್ತಾರೆ.

ಸರ್ಕಾರವು ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕೃತೋಇ 51 ಕೃವಿವಿ 2000 ಬೆಂಗಳೂರು ದಿನಾಂಕ: 26ನೇ ಜುಲೈ 2005**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದಾಗಿ ಸರ್ಕಾರವು ಸಹಾಯಕ ಪ್ರಾಧ್ಯಾಪಕರು ಈ ಹಿಂದೆ ಭೋದಕರು: ಸಂಶೋಧನಾ ಸಹಾಯಕರು: ವಿಸ್ತರಣಾ ಮಾರ್ಗದರ್ಶಿಗಳೆಂದು ಕೃಷಿ ವಿಶ್ವವಿದ್ಯಾನಿಲಯಗಳಲ್ಲಿ ಸಲ್ಲಿಸಿದ ಸೇವೆಯನ್ನು ಪರಿಗಣಿಸಿ ಕೇರಿಯರ್ ಅಡ್ವಾನ್ಸ್‌ಮೆಂಟ್ ಸ್ಕೀಮ್‌ನಲ್ಲಿ ಕೃಷಿ ವಿಶ್ವವಿದ್ಯಾನಿಲಯಗಳು ಸಹಾಯಕ ಪ್ರಾಧ್ಯಾಪಕರ ಹುದ್ದೆಗೆ ನೀಡಿದ ಬಡ್ತಿಯನ್ನು ಈ ಕೆಳಕಂಡ ಷರತ್ತಿಗೆ ಒಳಪಟ್ಟು ಸ್ಥಿರೀಕರಿಸಿ ಆದೇಶಿಸಿದೆ.

1. This benefit is not available to those who have got similar benefit of counting the service rendered as Research Assistant/Instructor/ Extension Guide for the purpose of TBP of MUS.
2. Only the service rendered by the Research Assistant/ Instructor/Extension Guide after obtaining the M.Sc., Degree will be Counted as qualifying service.
3. Fixation of pay on promotion under Career Advancement Scheme by counting the service Rendered in the cadre of Research Assistant/Instructor/Extension Guide Shall be notional and monetary benefit shall be admissible from 14.1.2000.
4. The service rendered in the cadre of Research Assistant/Instructor/Extension Guide shall not count for seniority in the cadre of Assistant Professor.

ಇದಕ್ಕೆ ತಗಲುವ ಹೆಚ್ಚುವರಿ ವೆಚ್ಚಕ್ಕೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಕೂಡದು. ಕೃಷಿ ವಿಶ್ವವಿದ್ಯಾನಿಲಯಗಳಿಗೆ ನಿಗದಿಪಡಿಸಿರುವ ಅನುದಾನದಲ್ಲಿಯೇ ಭರಿಸತಕ್ಕದ್ದು.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಸಹಮತಿ ಸಂಖ್ಯೆ: ಎಫ್‌ಡಿ: 416 ಇಎಕ್ಸ್‌ಪಿ: IV/05 ದಿನಾಂಕ: 20.7.2005ರ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1081

**ಜಿ. ಕೆ. ಗುರಾಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕೃಷಿ ಮತ್ತು ತೋಟಗಾರಿಕೆ ಇಲಾಖೆ.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಕರ್ನಾಟಕ ಗ್ರಾಮೀಣ ನೀರು ಸರಬರಾಜು ಮತ್ತು ನೈರ್ಮಲ್ಯ ಸಂಸ್ಥೆಯಲ್ಲಿ ವಿಶೇಷ ಕರ್ತವ್ಯಾಧಿಕಾರಿ ಹುದ್ದೆಯನ್ನು ತಾತ್ಕಾಲಿಕವಾಗಿ ಸೃಜಿಸುವ ಬಗ್ಗೆ.

**ಉಲ್ಲೇಖ :** 1. ಸಿಆಸು ಇಲಾಖೆಯ ಅಧಿಸೂಚನೆ ಸಂಖ್ಯೆ: ಸಿಆಸುಇ 322 ಎಸ್‌ಎಎಸ್ 2005, ದಿನಾಂಕ: 21.6.2005.

2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 322 ಸೇಆಸೆ 2005, ದಿನಾಂಕ: 21.6.2005.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಅಧಿಸೂಚನೆಯಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯಲ್ಲಿ ಸ್ಥಳನಿರೀಕ್ಷಣೆಯಲ್ಲಿರುವ ಶ್ರೀ ಶಂಭುದಯಾಳ್ ಮೀನ, ಐಎಎಸ್ ರವರನ್ನು ವಿಶೇಷ ಕರ್ತವ್ಯಾಧಿಕಾರಿ, ಕರ್ನಾಟಕ ಗ್ರಾಮೀಣ ನೀರು ಸರಬರಾಜು ಮತ್ತು ನೈರ್ಮಲ್ಯ ಸಂಸ್ಥೆ, ಬೆಂಗಳೂರು, ಇಲ್ಲಿ ಹೊಸದಾಗಿ ಸೃಜಿಸಲಾದ ಹುದ್ದೆಗೆ ನೇಮಿಸಲಾಗಿದೆ. ತದನಂತರ, ಈ ಹುದ್ದೆಯನ್ನು ನಿರ್ದೇಶಕರ ಹುದ್ದೆಗೆ ಮೇಲ್ದರ್ಜೆಗೇರಿಸಿದ ನಂತರ ವ್ಯಾಸಂಗದ ರಜೆಯ ಮೇಲೆ ತೆರಳಲಿರುವ ಶ್ರೀ ಎಲ್. ಕೆ. ಅತೀಕ್, ಐಎಎಸ್ ರವರ ಸ್ಥಳಕ್ಕೆ ನೇಮಿಸಲು ಆದೇಶಿಸಲಾಗಿದೆ.

ಓದಲಾದ (2)ರ ಆದೇಶದಲ್ಲಿ ಶ್ರೀ ಶಂಭುದಯಾಳ್ ಮೀನ, ಐಎಎಸ್ ರವರನ್ನು ಕರ್ನಾಟಕ ಗ್ರಾಮೀಣ ನೀರು ಸರಬರಾಜು ಮತ್ತು ನೈರ್ಮಲ್ಯ ಸಂಸ್ಥೆ, ಬೆಂಗಳೂರು, ಇಲ್ಲಿ ವಿಶೇಷ ಕರ್ತವ್ಯಾಧಿಕಾರಿಯಾಗಿ ಹೊಸದಾಗಿ ಸೃಜಿಸಿರುವ ಹುದ್ದೆಗೆ ನೇಮಿಸಲು ಹಾಗೂ ಹಾಲಿ ನಿರ್ದೇಶಕರು ಹಾಗೂ ಪದನಿಮಿತ್ತ ಸರ್ಕಾರದ ಅಪರ ಕಾರ್ಯದರ್ಶಿ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಶ್ರೀ ಎಲ್. ಕೆ. ಅತೀಕ್ ರವರ ಬಿಡುಗಡೆ ನಂತರ ಈ ಹುದ್ದೆಯನ್ನು ರೂ.18,400-500-22,400ರ ವೇತನಶ್ರೇಣಿಯಲ್ಲಿ ಐಎಎಸ್ ಸೂಪರ್ ಟೈಮ್ ಸ್ಕೇಲ್ ಹುದ್ದೆಗೆ ಉನ್ನತೀಕರಿಸುವ ಬಗ್ಗೆ ಸೂಕ್ತ ಕ್ರಮ ಕೈಗೊಳ್ಳಲು ಕೋರಲಾಗಿದೆ. ಆದರೆ, ಈ ಯೋಜನೆಯು ವಿಶ್ವಬ್ಯಾಂಕ್ ನೆರವಿನ ಯೋಜನೆಯಾಗಿದ್ದು, ಈ ಯೋಜನೆಯು ನಿರ್ಣಾಯಕ ಘಟ್ಟದಲ್ಲಿರುವುದರಿಂದ ಪ್ರಮುಖ ಕೆಲಸ ಕಾರ್ಯಗಳನ್ನು ಆಗಸ್ಟ್ 2005 ರೊಳಗಾಗಿ ಸಾಧಿಸಬೇಕಾಗಿರುವುದರಿಂದ, ನಿರ್ದೇಶಕರು ಹಾಗೂ ಪದನಿಮಿತ್ತ ಸರ್ಕಾರದ ಅಪರ ಕಾರ್ಯದರ್ಶಿ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಶ್ರೀ ಎಲ್. ಕೆ. ಅತೀಕ್ ರವರ ಸೇವೆಯು ಅತೀ ಅವಶ್ಯಕವಾಗಿದ್ದು, ಅವರು ರಜೆಯ ಮೇಲೆ ತೆರಳುವುದು ವಿಳಂಬವಾಗುತ್ತಿರುವುದರಿಂದ ತಾತ್ಕಾಲಿಕವಾಗಿ ವಿಶೇಷ ಕರ್ತವ್ಯಾಧಿಕಾರಿ ಹುದ್ದೆಯನ್ನು ಸೃಜಿಸಲು ನಿರ್ಣಯಿಸಲಾಗಿರುತ್ತದೆ. ಸದರಿ ಹುದ್ದೆಗೆ ಶ್ರೀ ಶಂಭುದಯಾಳ್ ಮೀನ, ಐಎಎಸ್ ರವರನ್ನು ನೇಮಿಸಲು ತೀರ್ಮಾನಿಸಲಾಗಿದೆ. ಅದರಂತೆ ಈ ಕೆಳಗಿನ ಆದೇಶ

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 166 ಪಬವ 2005, ಬೆಂಗಳೂರು, ದಿನಾಂಕ: 27ನೇ ಜುಲೈ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಗ್ರಾಮೀಣ ನೀರು ಸರಬರಾಜು ಮತ್ತು ನೈರ್ಮಲ್ಯ ಸಂಸ್ಥೆ, ಬೆಂಗಳೂರು, ಇಲ್ಲಿನ ವಿಶೇಷ ಕರ್ತವ್ಯಾಧಿಕಾರಿ (ರೂ.18,400-500-22,400ರ ವೇತನಶ್ರೇಣಿಯಲ್ಲಿ ಐಎಎಸ್ ಸೂಪರ್ ಟೈಮ್ ಸ್ಕೇಲ್) ಹುದ್ದೆಯನ್ನು ತಾತ್ಕಾಲಿಕವಾಗಿ ಸೃಜಿಸಲಾಗಿದೆ. ಸದರಿ ಹುದ್ದೆಗೆ ಶ್ರೀ ಶಂಭುದಯಾಳ್ ಮೀನ, ಐಎಎಸ್ ರವರಿಗೆ ದಿನಾಂಕ: 22.6.2005 ರಿಂದ ಜಾರಿಗೆ ಬರುವಂತೆ ಮರುನೇಮಕಾತಿ ಆದೇಶ ಹೊರಡಿಸಲಾಗಿದೆ.

ನಿರ್ದೇಶಕರು ಹಾಗೂ ಪದನಿಮಿತ್ತ ಸರ್ಕಾರದ ಅಪರ ಕಾರ್ಯದರ್ಶಿ, ಕರ್ನಾಟಕ ಗ್ರಾಮೀಣ ನೀರು ಸರಬರಾಜು ಮತ್ತು ನೈರ್ಮಲ್ಯ ಸಂಸ್ಥೆ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಶ್ರೀ ಎಲ್. ಕೆ. ಅತೀಕ್, ಐ.ಎ.ಎಸ್. ರವರು ವ್ಯಾಸಂಗದ ರಜೆಯ ಮೇಲೆ ತೆರಳುವ ದಿನಾಂಕ: 28.8.2005 ರಿಂದ ಜಾರಿಗೆ ಬರುವಂತೆ ವಿಶೇಷಾಧಿಕಾರಿ ಹುದ್ದೆಯು ರದ್ದಾಗುತ್ತದೆ. ಶ್ರೀ ಶಂಭುದಯಾಳ್ ಮೀನ, ಐ.ಎ.ಎಸ್. ರವರು ನಿರ್ದೇಶಕರು ಮತ್ತು ಪದನಿಮಿತ್ತ ಸರ್ಕಾರದ ಕಾರ್ಯದರ್ಶಿ ಹುದ್ದೆಯ ಪ್ರಭಾರ ವಹಿಸಿಕೊಳ್ಳುವರು. ಹಾಗೂ ಸದರಿಯವರು ನಿರ್ದೇಶಕರ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುವವರೆಗೆ ಈ ಹುದ್ದೆಯು ರೂ.18,400-22,400ರ ವೇತನಶ್ರೇಣಿಯಲ್ಲಿ ಉನ್ನತೀಕರಿಸಿದ ಐಎಎಸ್ ಸೂಪರ್ ಟೈಮ್ ಸ್ಕೇಲ್ ಹುದ್ದೆಯಾಗಿದ್ದು "ನಿರ್ದೇಶಕರು ಹಾಗೂ ಪದನಿಮಿತ್ತ ಸರ್ಕಾರದ ಕಾರ್ಯದರ್ಶಿ" ಹುದ್ದೆ ಎಂದು ಪುನರ್‌ನಾಮಾಂಕಿತಗೊಳ್ಳುತ್ತದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ/1421/ವೆಚ್ಚ-6/2005, ದಿನಾಂಕ: 23.7.2005 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಲ್. ಷಣ್ಮುಖ**

ಪಿ.ಆರ್.1082

ಸರ್ಕಾರದ ಅಧೀನ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

**ವಿಷಯ :** ಶ್ರೀ ಕೆ.ಆರ್.ಚಾಮಯ್ಯ, ನಿವೃತ್ತ ಉಪಾಧ್ಯಕ್ಷರು, KAT ಇವರಿಗೆ ಕ್ರೋಢೀಕೃತ ಸಂಪುಟ ಸಿದ್ಧಪಡಿಸುವ ಕಾರ್ಯವನ್ನು ವಹಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಸಂವ್ಯಶಾಇ 41 ಆಡಳಿತ 96, ದಿನಾಂಕ 07.08.1996.

2. ದಿನಾಂಕ 28.03.2002ರ ವಿಧಾನ ಪರಿಷತ್ತಿನ ನಡವಳಿ

ಶ್ರೀ ಕೆ. ಆರ್ ಚಾಮಯ್ಯ, ನಿವೃತ್ತ ಉಪಾಧ್ಯಕ್ಷರು, ಕೆ.ಎ.ಟಿ., ಇವರಿಗೆ 01.01.1956ರಿಂದ ಹಿಂದಿನ ಅವಧಿಯಲ್ಲಿನ ಪ್ರಾಂತೀಯ ಅಧಿನಿಯಮಗಳು ಅಂದರೆ ಬೊಂಬಾಯಿ ಪ್ರದೇಶದ ಅಧಿನಿಯಮಗಳು, ಹೈದರಾಬಾದ್ ಪ್ರದೇಶಗಳಲ್ಲಿನ ಅಧಿನಿಯಮಗಳು, ಕೂರ್ಗ್ ಪ್ರದೇಶದಲ್ಲಿನ ಅಧಿನಿಯಮಗಳು, ಮದ್ರಾಸ್ ಪ್ರದೇಶಗಳಲ್ಲಿನ ಅಧಿನಿಯಮಗಳು ಹಾಗೂ ಹಳೆ ಮೈಸೂರು ಪ್ರದೇಶದ ಅಧಿನಿಯಮಗಳು ಒಟ್ಟು ಸುಮಾರು 400 ಅಧಿನಿಯಮಗಳಿದ್ದು ಇವುಗಳನ್ನು ಕ್ರೋಢೀಕರಿಸಿ, ಇಂದೀಕರಿಸಿ ಸಂಪುಟಗಳಲ್ಲಿ ಪ್ರಕಟಿಸಲು ಏಕ ಸದಸ್ಯ ಸಮಿತಿಯನ್ನು ರಚಿಸುವುದು ಅವಶ್ಯಕವೆಂದು ಸರ್ಕಾರ ಪರಿಗಣಿಸಿದೆ. ಇದಕ್ಕೆ ಆರ್ಥಿಕ ಇಲಾಖೆಯ ಸಹಮತಿಯನ್ನು ಪಡೆಯಲಾಗಿದೆ.

ಮೇಲ್ಕಂಡ ಪ್ರಸ್ತಾವನೆಯನ್ನು ಮಾನ್ಯ ಮುಖ್ಯಮಂತ್ರಿಗಳು ಅನುಮೋದಿಸಿರುವರು. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಸಂವ್ಯಶಾಇ ೩೮ ಆಡಳಿತ ೨೦೦೪, ಬೆಂಗಳೂರು, ದಿನಾಂಕ: ೨೧ನೇ ಜುಲೈ ೨೦೦೫.**

01.01.1956ರ ಪೂರ್ವದಲ್ಲಿ ಅಧಿನಿಯಮಿತವಾಗಿದ್ದು ಪ್ರಸ್ತುತ ರಾಜ್ಯದಲ್ಲಿ ಜಾರಿಯಲ್ಲಿರುವ ಪ್ರಾಂತೀಯ ಅಧಿನಿಯಮಗಳು ಅಂದರೆ ಬೊಂಬಾಯಿ ಪ್ರದೇಶದ ಅಧಿನಿಯಮಗಳು, ಹೈದರಾಬಾದ್ ಪ್ರದೇಶಗಳಲ್ಲಿನ ಅಧಿನಿಯಮಗಳು, ಕೂರ್ಗ್ ಪ್ರದೇಶದಲ್ಲಿನ ಅಧಿನಿಯಮಗಳು, ಮದ್ರಾಸ್ ಪ್ರದೇಶಗಳಲ್ಲಿನ ಅಧಿನಿಯಮಗಳು ಹಾಗೂ ಹಳೆ ಮೈಸೂರು ಪ್ರದೇಶದ ಅಧಿನಿಯಮಗಳು ಒಟ್ಟು ಸುಮಾರು 400 ಅಧಿನಿಯಮಗಳನ್ನು ಕ್ರೋಢೀಕರಿಸಿ, ಇಂದೀಕರಿಸಿ ಸಂಪುಟಗಳಲ್ಲಿ ಪ್ರಕಟಪಡಿಸಲು ಹಾಗೂ ರಾಜ್ಯ ಸರ್ಕಾರವು ಉಲ್ಲೇಖಿಸಬಹುದಾದಂತೆ ಮೇಲಿನ ವಿಷಯಕ್ಕೆ ಅನುಷಂಗಿಕವಾದ ಇತರ ಯಾವುದೇ ವಿಷಯದ ಬಗ್ಗೆ ಕಾರ್ಯ ನಿರ್ವಹಿಸಲು ಏಕ ಸದಸ್ಯ ಸಮಿತಿಯನ್ನು ರಚಿಸಿ ಶ್ರೀ ಕೆ. ಆರ್.ಚಾಮಯ್ಯ, ನಿವೃತ್ತ ಉಪಾಧ್ಯಕ್ಷರು, ಕರ್ನಾಟಕ ಆಡಳಿತ ಮಂಡಳಿ, ಇವರನ್ನು ಸಮಿತಿಯ ಏಕೈಕ ಸದಸ್ಯರನ್ನಾಗಿ ನೇಮಕ ಮಾಡಿ ಆದೇಶಿಸಲಾಗಿದೆ.

ಸಮಿತಿಗೆ ಅಗತ್ಯವಾದ ಮಾಹಿತಿಯನ್ನು ಪತ್ರಾಗಾರ ಇಲಾಖೆಯಿಂದ ನೇರವಾಗಿ ಪಡೆದುಕೊಳ್ಳಬಹುದಾಗಿರುತ್ತದೆ.

ಸಮಿತಿಯ ಪೂರಕ ಸಿಬ್ಬಂದಿಯ ರಚನೆಯನ್ನು ಈ ಕೆಳಕಂಡಂತೆ ಮಾಡಲಾಗಿದೆ.

| | | | |
|---|---|---|---|
| (1) | ಸಮಿತಿಯ ಕಾರ್ಯದರ್ಶಿ | ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ ವೃಂದದಿಂದ ನಿಯೋಜನೆ ಮೇರೆಗೆ (ರೂ.8000-13440) | ಒಂದು ಹುದ್ದೆ |
| (2) | ಅಕೌಂಟೆಂಟ್ | S.A.Dಯಲ್ಲಿನ Accountant ಹುದ್ದೆಗೆ ಸಮನಾದ ಹುದ್ದೆ (ರೂ.5575-10620) | ಒಂದು ಹುದ್ದೆ |
| (3) | ಶೀಘ್ರಲಿಪಿಗಾರರು | ಕಂಪ್ಯೂಟರ್ ತರಬೇತಿಯಿರುವವರು (ರೂ.4150-7800) | ಎರಡು ಹುದ್ದೆ |
| (4) | ವಾಹನ ಚಾಲಕ | ರೂ.3000-5450 | ಒಂದು ಹುದ್ದೆ |
| (5) | ಜವಾನರು | ರೂ.2600-4350 | ಎರಡು ಹುದ್ದೆ |

ಸಿಬ್ಬಂದಿಯನ್ನು ಯಾವುದಾದರೂ ರಾಜ್ಯ ಸಿವಿಲ್ ಸೇವೆಯಿಂದ ನಿಯೋಜನೆಯ (Deputation) ಮೂಲಕ ಅಥವಾ ಸೇವೆಯಿಂದ ನಿವೃತ್ತರಾದವರನ್ನು ಗುತ್ತಿಗೆ ಆಧಾರದ ಮೇಲೆ ನೇಮಿಸಿಕೊಳ್ಳಲು ಸಮಿತಿಗೆ ಅಧಿಕಾರ ನೀಡಲಾಗಿದೆ.

ಸಮಿತಿಯ ಅವಧಿಯು ಈ ಆದೇಶ ಹೊರಡಿಸಿ, ಕಛೇರಿ ನಡೆಸಲು ಜಾಗವನ್ನು ಒದಗಿಸಿ ಸದಸ್ಯರು ಕೆಲಸ ಪ್ರಾರಂಭಿಸಿದ ದಿನಾಂಕದಿಂದ ಜಾರಿಯಾಗಿ ಒಂದು ವರ್ಷದವರೆಗೆ ಇರುತ್ತದೆ.

ಸಮಿತಿಯ ಸದಸ್ಯರು ಮತ್ತು ಕಾರ್ಯದರ್ಶಿಗಳಿಗೆ ತಲಾ ಒಂದು ವಾಹನ ಹಾಗೂ ಎರಡು ದೂರವಾಣಿಯನ್ನು ಪಡೆಯಲು ಮಂಜೂರಾತಿ ನೀಡಲಾಗಿದೆ.

ಈ ಸಮಿತಿಯ ಸೇವೆಯನ್ನು Encashment Benefits ಮತ್ತು pension benefits ಗಳಿಗೆ ಹೊರತುಪಡಿಸಲಾಗಿದೆ. ಇದಕ್ಕೆ ಒಳಪಟ್ಟು ಸಮಿತಿಯ ಸದಸ್ಯರ ಸೇವಾ ಷರತ್ತುಗಳು ಕೆಳಕಂಡಂತಿವೆ:-

(1) ಕೇಂದ್ರ ಸಿವಿಲ್ ಸೇವೆಗಳ (ರಜೆ) ನಿಯಮಗಳು, 1972ರ ಅಡಿಯಲ್ಲಿ ಸರ್ಕಾರದ ಒಬ್ಬ ಅಧಿಕಾರಿಗೆ ಅಂಗೀಕಾರಾರ್ಹವಾದಂಥ ರಜೆಯನ್ನು ಪಡೆಯಲು ಅವರು ಹಕ್ಕುಳ್ಳವರಾಗಿರುತ್ತಾರೆ.

(2) ಈ ಆದೇಶದಲ್ಲಿ ಯಾವ ಸೇವಾ ಷರತ್ತುಗಳ ಬಗ್ಗೆ ಉಪಬಂಧವನ್ನು ಕಲ್ಪಿಸಲಾಗಿಲ್ಲವೋ ಆ ಸೇವಾ ಷರತ್ತುಗಳ ಸಂಬಂಧದಲ್ಲಿ ಉಚ್ಚ ನ್ಯಾಯಾಲಯದ ನ್ಯಾಯಾಧೀಶರುಗಳ (ಸೇವಾ ಷರತ್ತುಗಳು) ಅಧಿನಿಯಮ, 1954 ಮತ್ತು ಉಚ್ಚ ನ್ಯಾಯಾಲಯದ ನ್ಯಾಯಾಧೀಶರುಗಳ (ಪ್ರವಾಸ ಭತ್ಯೆ) ನಿಯಮಗಳು, 1956 ಮತ್ತು ಕಾಲಕಾಲಕ್ಕೆ ತಿದ್ದುಪಡಿಯಾದಂತೆ ಅದರಡಿ ಮಾಡಲಾದ ನಿಯಮಗಳು ಅನ್ವಯವಾಗುತ್ತವೆ.

(3) ಉಚ್ಚ ನ್ಯಾಯಾಲಯದ ಹಾಲಿ ನ್ಯಾಯಾಧೀಶರಿಗೆ ಕಾಲಕಾಲಕ್ಕೆ ಅಂಗೀಕಾರಾರ್ಹವಾಗುವಂಥ ಇತರ ಭತ್ಯೆಗಳು, ವಿಶೇಷ ಸೌಲಭ್ಯಗಳು, ಸೌಕರ್ಯಗಳು, ವಿಶೇಷಾಧಿಕಾರಗಳು ಮತ್ತು ಸವಲತ್ತುಗಳನ್ನು ಪಡೆದುಕೊಳ್ಳಲು ಅವರು ಹಕ್ಕುಳ್ಳವರಾಗಿರುತ್ತಾರೆ.

(4) ಕಾಲಕಾಲಕ್ಕೆ ಆಗುವ ತಿದ್ದುಪಡಿಗಳಿಗೆ ಅನುಸಾರವಾಗಿ ಆಯೋಗ:ಸಮಿತಿಯ ಅಧ್ಯಕ್ಷ: ಸದಸ್ಯರಾಗಿ ಮರು ನೇಮಕ ಮಾಡಲಾದ ಉಚ್ಚ ನ್ಯಾಯಾಲಯದ ನಿವೃತ್ತ ನ್ಯಾಯಾಧೀಶರಿಗೆ ಅನ್ವಯವಾಗುವಂಥ ತುಟ್ಟಿ ಭತ್ಯೆ ಹಾಗೂ ನಗರ ಪರಿಹಾರ ಭತ್ಯೆಗಳನ್ನು ಪಡೆಯಲು ಹಕ್ಕುಳ್ಳವರಾಗಿರುತ್ತಾರೆ.

ಪರಂತು, ಸರ್ಕಾರದಡಿಯ ಅಥವಾ ಸರ್ಕಾರದ ಸ್ವಾಮ್ಯದಲ್ಲಿರುವ ಅಥವಾ ನಿಯಂತ್ರಣದಲ್ಲಿರುವ ಯಾವುದೇ ಸ್ಥಳೀಯ ಸಂಸ್ಥೆ ಅಥವಾ ಯಾವುದೇ ನಿಗಮದಡಿಯ ಅವರ ಹಿಂದಿನ ಸೇವೆಯ ಸಂಬಂಧದಲ್ಲಿ ವಿಶ್ರಾಂತಿ ವೇತನವನ್ನು ಅವರು ಪಡೆಯುತ್ತಿದ್ದಲ್ಲಿ, ಅಂಥ ವೇತನದಲ್ಲಿ ಅವರಿಗೆ ಅಂಗೀಕಾರಾರ್ಹವಾದ ವಿಶ್ರಾಂತಿ ವೇತನದ ಮೊಬಲಗನ್ನು ಕಳೆದುಕೊಳ್ಳಲಾಗುವುದು.

ಸಮಿತಿಯ ವೆಚ್ಚವನ್ನು, ಲೆಕ್ಕ ಶೀರ್ಷಿಕೆ "2052-00-090-0-02 ಸಮಿತಿ ಸಮ್ಮೇಳನ ಮತ್ತು ನ್ಯಾಯಾಧೀಕರಣ ಮುಂತಾದವುಗಳಿಗೆ ಸಂಬಂಧಪಟ್ಟ ವೆಚ್ಚ" ದ ಅಡಿಯಲ್ಲಿ ಭರಿಸಲಾಗುವುದು.

ಟಿಪ್ಪಣಿ ಸಂಖ್ಯೆ: ಆಇ 410 ವೆಚ್ಚ-7 105 ದಿನಾಂಕ:18.6.2005ರಲ್ಲಿ ಆರ್ಥಿಕ ಇಲಾಖೆಯು ಸಹಮತಿಯನ್ನು ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ದ್ವಾರಕನಾಥ್ ಬಾಬು**

ಪಿ.ಆರ್.1059 ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ, ಸರ್ಕಾರದ ಉಪ ಕಾರ್ಯದರ್ಶಿ,
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಡಿಆರ್‌ಡಿಎ ಆಡಳಿತ ಯೋಜನೆಯಡಿ ಬದಲಿ ವಾಹನ ಖರೀದಿಸುವ ಬಗ್ಗೆ.

**ಓದಲಾಗಿದೆ :** 1. ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ: ಆರ್.20015-32-2004 ಡಿಆರ್‌ಡಿಎ ದಿನಾಂಕ: 3.1.2005.
2. ಚಿಕ್ಕಮಗಳೂರು ಜಿಲ್ಲೆಯ ಪತ್ರದ ದಿನಾಂಕ: 04.03.2005, 05,05,2005 ಮತ್ತು 21.05.2005.

**ಪ್ರಸ್ತಾವನೆ:**

ಕೇಂದ್ರ ಸರ್ಕಾರವು ಉಲ್ಲೇಖ (1)ರ ಪತ್ರದಲ್ಲಿ ಬದಲಿ ವಾಹನ ಖರೀದಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರ ನೀಡಿರುತ್ತದೆ. ಇದರನ್ವಯ ಚಿಕ್ಕಮಗಳೂರು ಜಿಲ್ಲಾ ಪಂಚಾಯತ್ ದಿನಾಂಕ: 04.03.2005 ರಂದು ಬದಲಿ ವಾಹನ ಖರೀದಿಸುವ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿತು. ದಿನಾಂಕ: 28.05.2002 ರಂದು ಚಿಕ್ಕಮಗಳೂರು ಪ್ರಾದೇಶಿಕ ಅಧಿಕಾರಿಗಳು, ಎಂವೈಸಿ 7384 ವಾಹನವನ್ನು ಅನುಪಯುಕ್ತವೆಂದು ಘೋಷಿಸಿ ಇದರ ಅಂದಾಜು ಬೆಲೆ ರೂ.24,000-00 ವೆಂದು ಅಂದಾಜಿಸಿದ್ದರು. ಆದರೆ ಜಿಲ್ಲಾ ಪಂಚಾಯತ್ ಸದರಿ ವಾಹನವನ್ನು ದಿನಾಂಕ: 25.11.2002 ರಲ್ಲಿ ಬಹಿರಂಗ ಹರಾಜು ಮಾಡಿ ರೂ.9,847-00ನ್ನು ದಿನಾಂಕ: 03.03.2005 ರಂದು ಸರ್ಕಾರಕ್ಕೆ ಜಮೆ ಮಾಡಿದೆ. ಹೊಸ ಕಾರನ್ನು ಖರೀದಿಸಲು ಮೆ: ಹಿಂದೂಸ್ಥಾನ್ ಮೋಟಾರ್ಸ್ ಕಂಪನಿಯವರಿಂದ Proforma invoice ಪಡೆದಿದ್ದು, ಕಾರಿನ ಅಂದಾಜು ಬೆಲೆ ರೂ.4,12,366/- ಆಗುವುದು. ಹರಾಜು ಮಾಡಿದ ವಾಹನ ಸಂಖ್ಯೆ: ಎಂವೈಸಿ 7384ರ ಬದಲಿಗೆ ಡಿಆರ್‌ಡಿಎ ಆಡಳಿತ ವೆಚ್ಚದಲ್ಲಿ ಉಳಿತಾಯವಾಗುವ ಹಣದಿಂದ ಒಂದು ಅಂಬಾಸಿಡರ್ ಕಾರು ಖರೀದಿಸಲು ಅನುಮೋದನೆ ಕೋರಿರುತ್ತಾರೆ. ಆದ ಕಾರಣ ಕಾರು ಖರೀದಿಗೆ ಅನುಮತಿ ನೀಡಲು ಈ ಆದೇಶ

### ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 4 ಸ್ವಜಯೋ ಡಿಆರ್‌ಡಿಎ 2005, ಬೆಂಗಳೂರು, ದಿನಾಂಕ: 25ನೇ ಜುಲೈ 2005

ರಾಜ್ಯ ಸರ್ಕಾರವು ಚಿಕ್ಕಮಗಳೂರು ಜಿಲ್ಲೆಗೆ ಎಂವೈಸಿ 7384ರ ವಾಹನದ ಬದಲಿಗೆ ಒಂದು ಹೊಸ ಅಂಬಾಸಿಡರ್ ಕಾರನ್ನು ಖರೀದಿಸಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಅನುಮೋದನೆ ನೀಡಿದೆ.

ಕಾರನ್ನು ಕೇಂದ್ರ ಸರ್ಕಾರದ ಪತ್ರ ದಿನಾಂಕ: 3.01.2005 ರನ್ವಯ ಖರೀದಿಸತಕ್ಕದ್ದು.

ಡಿಆರ್‌ಡಿಎ ಆಡಳಿತ ಯೋಜನೆಯಡಿ ಜಿಲ್ಲೆಗೆ ನಿಗದಿಪಡಿಸಿರುವ ಅನುದಾನದಿಂದ ಭರಿಸತಕ್ಕದ್ದು.

ವೇತನಕ್ಕಾಗಿ ಖರ್ಚು ಮಾಡುವ ಗರಿಷ್ಠ ಶೇಕಡಾ 30 ರಷ್ಟರಲ್ಲಿ ಉಳಿತಾಯವಾಗುವ ಸಾದಿಲ್ವಾರು ವೆಚ್ಚದಿಂದ ಭರಿಸುವುದು ಹಾಗೂ ಖರೀದಿಸಿದ ನಂತರ ಸರ್ಕಾರಕ್ಕೆ ತಿಳಿಸತಕ್ಕದ್ದು. ಕಾರು ಖರೀದಿಯನ್ನು ಸರ್ಕಾರದ ಖರೀದಿ ನಿಯಮಗಳಿಗೊಳಪಟ್ಟು ಖರೀದಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಸಹಮತಿ ಸಂಖ್ಯೆ: ಆಇ 1423 ವೆಚ್ಚ-6: 2004 ದಿನಾಂಕ: 21.07.2005 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ. ಬಿ. ಹಿರೇಮಣಿಯವರ್**

ಪಿ.ಆರ್.1083 ನಿರ್ದೇಶಕರು (ಸ್ವಉಕಾ) ಮತ್ತು ಪ.ನಿ, ಸರ್ಕಾರದ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ :** ಉಡುಪಿ ಜಿಲ್ಲೆ, ಕಾರ್ಕಳ ತಾಲ್ಲೂಕು, ಕಾಂತಾವರ ಶ್ರೀ ನರಸಿಂಹ ದೇವಸ್ಥಾನವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಅಧಿಸೂಚನೆ ಸಂ. ಕಂಇ 77 ಮುಸೇವಿ 2003 ದಿನಾಂಕ: 30.04.2003.
2. ಧಾರ್ಮಿಕ ದತ್ತಿ ಆಯುಕ್ತರ ಪತ್ರ ಸಂ: ಏಕರೂಪಶಾಸನ: ಸಿಆರ್:43:2003-04 ದಿನಾಂಕ: 31.03.2005.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ:(1)ರ ಅಧಿಸೂಚನೆಯಲ್ಲಿ ರಾಜ್ಯದಲ್ಲಿನ 34,245 ದೇವಸ್ಥಾನಗಳನ್ನು ಅಧಿಸೂಚಿತ ಸಂಸ್ಥೆಗಳನ್ನಾಗಿ ಪ್ರಕಟಿಸಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (2)ರ ಪತ್ರದಲ್ಲಿ ಉಡುಪಿ ಜಿಲ್ಲೆ, ಕಾರ್ಕಳ ತಾಲ್ಲೂಕು, ಕಾಂತಾವರ ಶ್ರೀ ನರಸಿಂಹ ದೇವಸ್ಥಾನವು ಉಡುಪಿ ಶ್ರೀ ಪಲಿಮಾರು ಮಠಕ್ಕೆ ಸೇರಿದ ದೇವಸ್ಥಾನವಾಗಿರುವುದರಿಂದ ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ 1997 ಅಧ್ಯಾಯ (1)ರ ಪ್ರಾರಂಭಿಕ 4(1) ರಂತೆ ಕಾಯ್ದೆ ವ್ಯಾಪ್ತಿಯಿಂದ ವಿನಾಯಿತಿಗೊಳಿಸಲು ಹಾಗೂ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸಲು ಉಡುಪಿ ಜಿಲ್ಲಾಧಿಕಾರಿಗಳು ಮತ್ತು ಧಾರ್ಮಿಕ ದತ್ತಿ ಆಯುಕ್ತರು ಶಿಫಾರಸ್ಸು ಮಾಡಿದ್ದಾರೆ. ಸದರಿ ಶಿಫಾರಸ್ಸನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

### ಸರ್ಕಾರಿ ಪತ್ರ ಸಂಖ್ಯೆ: ಕಂಇ 40 ಮುಆಬಿ 2005, ಬೆಂಗಳೂರು, ದಿನಾಂಕ: 20ನೇ ಜುಲೈ 2005

ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ 1997ರ ಅಧಿನಿಯಮ 1 ಉಪನಿಯಮ 4(1)ರ ಪ್ರಕಾರ ಒಂದು ಮಠಕ್ಕೆ ಅಥವಾ ಅದಕ್ಕೆ ಸೇರಿದ ಒಂದು ದೇವಸ್ಥಾನಕ್ಕೆ ಅನ್ವಯಿಸತಕ್ಕದ್ದಲ್ಲ ಎಂದಿರುವುದರಿಂದ ಸರ್ಕಾರವು ಹೊರಡಿಸಿರುವ ದಿನಾಂಕ: 30.04.2003ರ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಉಡುಪಿ ಜಿಲ್ಲೆ, ಕಾರ್ಕಳ ತಾಲ್ಲೂಕು, ಕಾಂತಾವರ ಗ್ರಾಮದ ಶ್ರೀ ನರಸಿಂಹ ದೇವಸ್ಥಾನ ಕ್ರಮ ಸಂ: 57 ಪುಟ: 727ನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸಿ, ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಜಯಚಂದ್ರ**

ಪಿ.ಆರ್.1086 ಪೀಠಾಧಿಕಾರಿ, ಕಂದಾಯ ಇಲಾಖೆ, (ಮುಜರಾಯಿ).